ಕನ್ನಡ

# ಆಶ್ಚರ್ಯ ಚೂಡಾಮಣಿ



ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.



ರಾವ್ ಅಂಡ್ ಸನ್ಸ್
ಬೆಂಗಳೂರು – ೧೧

ಕನ್ನಡ

# ಆಶ್ಚರ್ಯ ಚೂಡಾಮಣಿ

(ಶಕ್ತಿಭದ್ರನ ಮೂಲ ಸಂಸ್ಕೃತ ನಾಟಕದ ಸರಳಾನುವಾದ)

ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.
ಸಂಸ್ಕೃತ ಪ್ರಧಾನಾಧ್ಯಾಪಕರು
ಕೆನರಾ ಕಾಲೇಜು, ಕುಮಟಾ (ಉ.ಕ.)





ರಾವ್ ಅಂಡ್ ಸನ್ಸ್
ಒಂದನೆಯ ಬ್ಲಾಕ್, ಜಯನಗರ
ಬೆಂಗಳೂರು – ೧೧

ಮೊದಲನೆಯ ಮುದ್ರಣ ೧೯೫೯

ಹಕ್ಕುಗಳು ಲೇಖಕರವು



ಬೆಲೆ : ಸಾಮಾನ್ಯ ಪ್ರತಿ ರೂ. ೧-೫೦

ಕ್ಯಾಲಿಕೋ ಪ್ರತಿ ರೂ. ೨-೫೦



ಮುದ್ರಕರು :

ಪ್ರಭಾ ಮುದ್ರಣಾಲಯ

ಬಸವನಗುಡಿ, ಬೆಂಗಳೂರು-೪.

# ಪೀಠಿಕೆ

## ೧. ಕವಿಯ ಕಾಲದೇಶಾದಿ ವಿಚಾರ :

ಶಕ್ತಿಭದ್ರನ 'ಆಶ್ಚರ್ಯ ಚೂಡಾಮಣಿ' ಎಂಬುದು ಮೊತ್ತಮೊದಲು ಪ್ರಕಟವಾಗಿ ವಿದ್ವಾಂಸರ ಮತ್ತು ರಸಿಕರ ಗಮನವನ್ನು ಸೆಳೆಯುವಂತಾದುದು ೧೯೨೬ರಲ್ಲಿ. ಅಲ್ಲಿಯವರೆಗೆ ಕೇರಳದ ಕೆಲವು ಪಂಡಿತರ ಹೊರತು ಉಳಿದವರಿಗೆ ಕವಿಯ ಅಥವಾ ಕೃತಿಯ ಹೆಸರು ಕೂಡ ಪರಿಚಿತವಾಗಿರಲಿಲ್ಲ. ಕೇರಳ ದೇಶದಲ್ಲಿ ದೊರೆತ ಆರು ತಾಳೆಯೋಲೆಗಳ ಸಹಾಯದಿಂದ ಇದನ್ನು ಮದ್ರಾಸಿನ ಬಾಲಮನೋರಮಾ ಪ್ರೆಸ್ಸಿನವರು ಪ್ರಕಟಪಡಿಸಿದರು. ಅವರ ಸಂಸ್ಕರಣದಲ್ಲಿ ಈ ನಾಟಕಕ್ಕೆ 'ಶಂಕರ' ನೆಂಬ ಸಹೃದಯನಿಂದ ರಚಿತವಾದ ಪ್ರಾಚೀನ ವ್ಯಾಖ್ಯಾನವೂ ಒಂದು ಸೇರಿಸಲ್ಪಟ್ಟಿದೆ. ವ್ಯಾಖ್ಯಾಕಾರನ ಕಾಲ ಹದಿನಾರನೆಯ ಶತಮಾನವಿರಬಹುದು.

ಶಕ್ತಿಭದ್ರನ ಈ ನಾಟಕ ಪ್ರಸ್ತಾವನೆ (='ಸ್ಥಾಪನೆ') ಯಲ್ಲಿ ಆತನ ಯವಾಗಿ ಖಚಿತವಾಗಿ ತಿಳಿದುಬರುವ ಅಂಶಗಳು ಗಮನಾರ್ಹವಾಗಿವೆ : ಕಕಾರನ ಹೆಸರು ಶಕ್ತಿಭದ್ರ; 'ಉನ್ಮಾದವಾಸವದತ್ತಾ' ಮುಂತಾ ಅವನ ಇತರ ಕೃತಿಗಳು. ಆತನ ವಾಸಸ್ಥಳ ದಕ್ಷಿಣದೇಶ. 'ಭರತ' ನ ಹೆಸರನ್ನು ಬಿಟ್ಟರೆ ಉಳಿದ ಯಾವ ಪ್ರಾಚೀನರ ನಾಮನಿರ್ದೇಶವೂ

ತಪತೀಸಂವರಣ', 'ಸುಭದ್ರಾಧನಂಜಯ' ಮುಂತಾದ ನಾಟಕಗಳನ್ನು ಕೇರಳದ ಮಹಾರಾಜ ಕುಲಶೇಖರವರ್ಮನ ಕಾಲ ಕ್ರಿ.ಶ. ೧೦ನೆಯ ನ. ಇವನ ಕಾಲದಲ್ಲಿ ಸಂಸ್ಕೃತನಾಟಕಗಳನ್ನು ರಂಗಭೂಮಿಯ ಆಡುತ್ತಿದ್ದರೆಂಬುದು ಈ ಗ್ರಂಥಗಳಿಂದಲೇ ತಿಳಿಯುತ್ತದೆ. ಆ ನಟರ ಶಾಕ್ಕಿಯರ್ ಎಂಬ ಜಾತಿ ಈಗಲೂ ಮಲೆಯಾಳದಲ್ಲಿ ಇದೆ. ಕುಲ ರವರ್ಮನ ಕಾಲದಲ್ಲಿ ಸಿದ್ಧವಾದ 'ಆಟ್ಟಪ್ರಕಾರಮ್' ಎಂಬ ನಟರ

ನಾಟಕಾಭಿನಯಗ್ರಂಥದಲ್ಲಿ ಪೂರ್ವೋಕ್ತವಾದ ನಾಟಕಗಳಲ್ಲದೆ ಹರ್ಷನ 'ನಾಗಾನಂದ'ವೂ ಶಕ್ತಿಭದ್ರನ 'ಆಶ್ಚರ್ಯ ಚೂಡಾಮಣಿ'ಯೂ ಉಲ್ಲೇಖಿಸಲ್ಪಟ್ಟಿವೆ. ಆದುದರಿಂದ ಶಕ್ತಿಭದ್ರನ ಕಾಲವು ಕ್ರಿ.ಶ. ಹತ್ತನೆಯ ಶತಮಾನಕ್ಕಿಂತ ಹಿಂದೆಯೇ ಎಂಬುದು ನಿರ್ವಿವಾದ. ಶಕ್ತಿಭದ್ರನ ಅನೇಕ ಪದ್ಯಗಳು ಭಾಸ, ಕಾಳಿದಾಸ, ಹರ್ಷ, ಭಟ್ಟನಾರಾಯಣರ ಪದ್ಯಗಳ ಛಾಯೆಯನ್ನು ತೋರಿಸುವುದರಿಂದ ಅವನು ಕ್ರಿ.ಶ. ಎಂಟನೆಯ ಶತಮಾನಕ್ಕಿಂತ ಹಿಂದೆ ಇದ್ದಿರಲಾರನೆಂಬುದು ಸ್ಪಷ್ಟ. ಕೇರಳದ ಪಂಡಿತವರ್ಗಗಳಲ್ಲಿ ಶಕ್ತಿಭದ್ರನನ್ನು ಕುರಿತ ಒಂದು ಐತಿಹ್ಯವಿದೆ. ಅದನ್ನು ನಂಬುವುದಾದರೆ ಶಕ್ತಿಭದ್ರನು ಸಾಕ್ಷಾತ್ ಶಂಕರಾಚಾರ್ಯರ ಶಿಷ್ಯ. ಗುರುಗಳು ಈ ಶಿಷ್ಯನ ಕೃತಿಯನ್ನು ಬಹಳವಾಗಿ ಮೆಚ್ಚಿದ್ದರಂತೆ. ಕಾರಣಾಂತರದಿಂದ ಕೃತಿಯ ಪ್ರತಿ ಲುಪ್ತವಾದಾಗ, ಶಂಕರಾಚಾರ್ಯರೇ ತಮ್ಮ ಸ್ಮರಣಶಕ್ತಿಯಿಂದ ಇದನ್ನು ಹೇಳಿ ಬರೆಯಿಸಿದರಂತೆ !*

## ೨. ಭಾಸ–ಸಮಸ್ಯೆ ಮತ್ತು ಆಶ್ಚರ್ಯ ಚೂಡಾಮಣಿ :

'ಆಶ್ಚರ್ಯ ಚೂಡಾಮಣಿ'ಯು ಪ್ರಕಟವಾದಾಗ ಸಂಸ್ಕೃತ ವಿದ್ವಾಂಸರೆಲ್ಲರೂ ಬಹಳವಾಗಿ ಚರ್ಚಿಸುತ್ತಿದ್ದ ಸಮಸ್ಯೆಯೆಂದರೆ ಅನಂತಶಯನದಿಂದ ಪ್ರಕಟವಾದ ನಾಟಕಚಕ್ರವು ಭಾಸಕರ್ತೃಕವೇ ಅಲ್ಲವೇ ಎಂಬುದು.§ 'ಸ್ವಪ್ನವಾಸವದತ್ತ'ವೇ ಮೊದಲಾದ ಹದಿಮೂರು ನಾಟಕಗಳನ್ನು ಪ್ರಸಿದ್ಧಿಗೆ ತಂದ ಸಂಪಾದಕರು ಗಣಪತಿಶಾಸ್ತ್ರಿಗಳು. ಅವರು ಈ ನಾಟಕಚಕ್ರದಲ್ಲೆಲ್ಲ ಕಾಣಬರುವ ಸಾಮ್ಯಗಳನ್ನೂ, 'ಸ್ವಪ್ನವಾಸವದತ್ತ'ವು ಭಾಸಕೃತವೆಂಬ ಪ್ರಸಿದ್ಧಿಯನ್ನೂ, ನಾಟಕಗಳ ಸ್ವಾರಸ್ಯವನ್ನೂ ಮುಂದೆ ಮಾಡಿ ಇವು ಭಾಸಕೃತವೆಂಬ ಸಿದ್ಧಾಂತಕ್ಕೆ ಬಂದಿದ್ದರು. ಆದರೆ ಕೇರಳದ ರಾಮಪಿಷಾರೊಟಿ, ಕೃಷ್ಣಪಿಷಾರೊಟಿ, ಮದ್ರಾಸಿನ ಪ್ರೊ। ಕುಪ್ಪುಸ್ವಾಮಿಶಾಸ್ತ್ರಿಗಳು ಮುಂತಾದ ಘನವಿದ್ವಾಂಸರು ಈ ಸಿದ್ಧಾಂತ

---

* ಪ್ರೊ। ಎಸ್. ಕುಪ್ಪುಸ್ವಾಮಿಶಾಸ್ತ್ರಿಗಳ ಮುನ್ನುಡಿ, 'ಆಶ್ಚರ್ಯ ಚೂಡಾಮಣಿ', (ಬಾಲಮನೋರಮಾ ಪ್ರೆಸ್, ಮದ್ರಾಸ್) ೧೯೨೬.

§ ಈ ಸಮಸ್ಯೆಯ ವಿವರಗಳಿಗೆ ಪ್ರೊ। ಎ. ಆರ್. ಕೃಷ್ಣಶಾಸ್ತ್ರಿಗಳ 'ಭಾಸಕವಿ' ಗ್ರಂಥವನ್ನು ನೋಡಿ.

ವನ್ನು ಒಪ್ಪದೆ ಹೋದುದಕ್ಕೆ ಶಕ್ತಿಭದ್ರನ 'ಆಶ್ಚರ್ಯ ಚೂಡಾಮಣಿ' ನಾಟಕ ದಲ್ಲಿಯೂ ಪೂರ್ವೋಕ್ತ ಸಾಮ್ಯಗಳೂ, ಭಾಸದ್ಯೋತಕವೆಂಬಂಶಗಳೂ ಇದ್ದುದು ಒಂದು ಮುಖ್ಯಕಾರಣ. ಇಲ್ಲಿಯೂ 'ಪ್ರಸ್ತಾವನೆ'ಯ ಬದಲು 'ಸ್ಥಾಪನೆ' ಬರುತ್ತದೆ. ಸೂತ್ರಧಾರನು ನಾಂದಿಯಾದಮೇಲೆ ಪ್ರವೇಶಿಸುತ್ತಾನೆ. ಅವನು ಹೇಳುವ ಕಡೆಯ ವಾಕ್ಯಗಳು ಕೂಡ ಒಂದೇ ಸಮ. ನಾಟಕದಲ್ಲಿ ಮುಂದೆಯೂ 'ಅಭಿಷೇಕನಾಟಕ', 'ಪ್ರತಿಮಾನಾಟಕ' ಗಳಲ್ಲಿ ಬರುವ ರಚನಾ ತಂತ್ರವಷ್ಟೇ ಅಲ್ಲ, ಉಕ್ತಿಗಳ ಸಾದೃಶ್ಯವೂ ಸ್ಫುಟವಾಗಿದೆ. ಕೇರಳದ ಭಾಷೆ ಯಲ್ಲಿ ಮಾತ್ರ ಬಳಕೆಯಲ್ಲಿರುವ ಅರ್ಥಗಳಲ್ಲಿ 'ಸಂಬಂಧ' ಮುಂತಾದ ಪದಗಳು ಪ್ರಯುಕ್ತವಾಗಿವೆ. ಇಲ್ಲಿಯೂ ಅದೇ ರೀತಿಯಾಗಿ ಅಪಾಣಿನೀಯ ಭಾಷೆ ಆಗಾಗ ಬರುತ್ತದೆ. ಎಲ್ಲಕ್ಕಿಂತಲೂ ಹೆಚ್ಚಾಗಿ, 'ಪ್ರತಿಮಾನಾಟಕ'ದಲ್ಲಿರು ವಂತೆ ಇಲ್ಲಿಯೂ ಕವಿ ರಾಮಾಯಣದ ಕಥೆಯನ್ನು ಅತ್ಯಂತ ನಾಟಕೀಯ ವಾಗಿ ಮಾಡಲು ತನ್ನ ಪ್ರತಿಭಾಸ್ವಾತಂತ್ರ್ಯವನ್ನು ತೋರಿಸಿದ್ದಾನೆ. ಶಕ್ತಿ ಭದ್ರನ ಶೈಲಿ ಅಷ್ಟೇ ಸರಲವೂ ಸಹಜವೂ ಓಜಸ್ವಿಯೂ ಆಗಿದೆ. ಈ ಸಾಮ್ಯ ಗಳನ್ನೆಲ್ಲ ಪರಿಶೀಲಿಸಿದರೆ ಅಜ್ಞಾತಕರ್ತೃಕವಾದ ಪೂರ್ವೋಕ್ತ ನಾಟಕಚಕ್ರ ವನ್ನೆಲ್ಲ ಕೇರಳನಾಟಕಚಕ್ರವೆನ್ನಬೇಕೆಂಬುದು ಒಂದು ವಾದ. ಔತ್ತರೇಯ ನಾದ ಭಾಸನನ್ನು ಅವುಗಳ ಕರ್ತೃವೆನ್ನುವುದಕ್ಕಿಂತ ದಾಕ್ಷಿಣಾತ್ಯನಾದ ಶಕ್ತಿ ಭದ್ರನನ್ನೇ ಎಲ್ಲಕ್ಕೂ ಕರ್ತೃವೆಂದೂಹಿಸುವುದು ಹೆಚ್ಚು ಸಮಂಜಸವೆನ್ನುವಷ್ಟು ದೂರ ಪ್ರೊ। ಕುಪ್ಪುಸ್ವಾಮಿಶಾಸ್ತ್ರಿಗಳು ಹೋಗಿದ್ದಾರೆ. ಶಕ್ತಿಭದ್ರನು ತನ್ನ ಮತ್ತೊಂದು ಕೃತಿಯೆನ್ನುವ 'ಉನ್ಮಾದವಾಸವದತ್ತಾ' ಎಂಬುದು ಭಾಸಕೃತ ವೆನ್ನಲಾಗಿರುವ 'ಪ್ರತಿಜ್ಞಾಯೌಗಂಧರಾಯಣ'ದ ನಾಮಾಂತರವಿರಬಹು ದೆಂದು ಅವರ ತರ್ಕ. ಈ ಸಮಸ್ಯೆ ಸಂಶಯಾತೀತವಾಗಿ ಇನ್ನೂ ಬಗೆಹರಿದಿಲ್ಲ.

**೩. ಕೃತಿವಿಮರ್ಶೆ :**

**೧. ಕಥಾಸಂವಿಧಾನ**—'ಆಶ್ಚರ್ಯ ಚೂಡಾಮಣಿ' ನಾಟಕಕ್ಕೆ ರಾಮಾ ಯಣದ ಕಥೆಯೇ ಮೂಲ. ಮೂಲಕಥೆ ಎಲ್ಲರಿಗೂ ಸುಪರಿಚಿತವಾಗಿರುವುದ ರಿಂದ ಅದರ ವಿವರಗಳನ್ನು ಬರೆಯುವ ಅಗತ್ಯವಿಲ್ಲ. ಬಾಲಕಾಂಡವೊಂದನ್ನು ಬಿಟ್ಟು ಉಳಿದ ಸಂಪೂರ್ಣ ರಾಮಾಯಣದ ಕಥೆ ನಾಟಕದಲ್ಲಿ ಅಡಕವಾಗಿದೆ.

ಗಾತ್ರದಲ್ಲಿ ಚಿಕ್ಕದಾದ ನಾಟಕದ ವ್ಯಾಪ್ತಿಯಲ್ಲಿ ಅಷ್ಟನ್ನೂ ಸ್ವಾರಸ್ಯವುಳಿಯುವಂತೆ, ಅಲ್ಲ, ಹೆಚ್ಚುವಂತೆ, ಹೇಗೆ ಸಂಗ್ರಹಿಸಬೇಕೆಂಬುದು ನಾಟಕಕಾರನ ಮುಂದೆ ನಿಲ್ಲುವ ಪ್ರಶ್ನೆ. ಕೇವಲ ರಸದ ದೃಷ್ಟಿಯಿಂದ ಮೂಲದ ಘಟನೆಗಳನ್ನೆಲ್ಲ ಪರೀಕ್ಷಿಸಿ ಯಾವುದು ನಾಟಕಕ್ಕೆ ಮುಖ್ಯ, ಯಾವುದು ಅಲ್ಲ, ಯಾವುದನ್ನು ವಿವರವಾಗಿ ಬೆಳೆಸಬೇಕು, ಯಾವುದನ್ನು ಸೂಚಿಸಿ ಕೈಬಿಡಬೇಕು, ಎಂಬ ನಿರ್ಣಯಕ್ಕೆ ಅವನು ಬರಬೇಕಾಗುತ್ತದೆ. ಮೂಲದ ವಿಕ್ಷಿಪ್ತ ಘಟನೆಗಳಿಗೂ ಕೂಡ ಒಂದು ಹೊಸ ಕಾರ್ಯಕಾರಣಭಾವ ನಾಟಕದಲ್ಲುಂಟಾಗುವಂತೆ ಹೊಸ ಅಂಶಗಳನ್ನೂ ಸೇರಿಸಿಕೊಳ್ಳಬೇಕಾಗುತ್ತದೆ. ನಾಟಕಕಾರನು ಹೀಗೆ ಹೊಸದಾಗಿ ಸೃಷ್ಟಿಸುವ ಅಂಶದಲ್ಲಿಯೇ ಅವನ ಪ್ರತಿಭಾಶಕ್ತಿಯ ಪರಿಚಯ ನಮಗೆ ಸ್ಪಷ್ಟವಾಗುತ್ತದೆ. ಇದನ್ನು ಪರೀಕ್ಷಿಸಿದರೆ ಶಕ್ತಿಭದ್ರನ ಪ್ರತಿಭೆ ನವನಿರ್ಮಾಣದಲ್ಲಿ ಪ್ರತಿಮಾನಾಟಕದ ಭಾಸನ ಪ್ರತಿಭೆಗೆ ಸರಿದೊರೆಯಾಗಿ ನಿಲ್ಲಬಲ್ಲುದೆನ್ನಬಹುದಾಗಿದೆ.

ಅಯೋಧ್ಯಾಕಾಂಡದ ಕಥೆಗೆಲ್ಲ ಕೈಕೆಯ ಕೈವಾಡ ಕಾರಣವಾದರೆ ಅರಣ್ಯಕಾಂಡದ ಮುಖ್ಯಘಟನೆ ಸೀತಾಪಹರಣ. ಅದಕ್ಕೆ ಒಂದು ನಿಮಿತ್ತ ರಾಕ್ಷಸವೈರ. ರಾಕ್ಷಸವೈರಕ್ಕೆ ತಾಟಕಾ, ಶೂರ್ಪಣಖಾದಿ ವೃತ್ತಾಂತಗಳೂ ಖರದೂಷಣಾದಿವಧೆಯೂ ಮೂಲ. ಸೀತಾಪಹರಣಕ್ಕೆ ಇನ್ನೊಂದು ಪ್ರಬಲ ನಿಮಿತ್ತ ರಾವಣನ ಸ್ತ್ರೀಮೋಹ. ಅದಕ್ಕೆ ಉದ್ದೀಪಕ ಸೀತೆಯ ಸೌಂದರ್ಯ. ವನವಾಸದಲ್ಲಿ ನಾರುಬಟ್ಟೆಯನ್ನುಡುವ ಸೀತೆಗೆ ರಾವಣನ ಅಂತಃಪುರದ ದೇವಾಂಗನೆಯರನ್ನೂ ಮೀರಿಸುವ ಸೌಂದರ್ಯವುಂಟಾದುದು ಹೇಗೆ? ಇದಕ್ಕೆ ವಾಲ್ಮೀಕಿಗಳು ಉತ್ತರಕೊಡುವ ಪ್ರಸಂಗಬರುವುದಿಲ್ಲ. ಆದರೆ ಶಕ್ತಿಭದ್ರನಿಗೆ ಇದೊಂದು ಮುಖ್ಯಪ್ರಶ್ನೆಯಾಗುತ್ತದೆ. ಮಾರೀಚನು ಮಾಯಾಬಲದಿಂದ ಸುವರ್ಣಮೃಗವಾದ ವಿಷಯ ಮೂಲದಲ್ಲಿದೆ. ರಾಕ್ಷಸರೆಲ್ಲರೂ ಮಾಯಾವಿಗಳೆಂದು ಉಕ್ತವಾಗಿದೆ. ಈ ಮಾಯೆಯ ಪ್ರಯೋಗವನ್ನು ರಾವಣಾದಿಗಳು ಮಾಡುವಾಗ ಇನ್ನೂ ಹೆಚ್ಚಿನ ಕೌಶಲವನ್ನೇಕೆ ತೋರಿಸಬಾರದು ? ಎಂದು ಶಕ್ತಿಭದ್ರನಿಗೆ ತೋರಿರಬೇಕು. ಇರಲಿ. ಮಾಯಾವಿಮೋಹಿತರಾದ ರಾಮಾದಿಗಳಿಗೆ ಅದರಿಂದ ವಿಮೋಚನೆಯಾಗುವ ಒಂದು ದಾರಿಯೇ ಬೇಡವೇ ? ರಾವಣನು ತಾಪಸನ ವೇಷದ ಬದಲು, ರಾಮನ ವೇಷದಿಂದಲೇ ಸೀತೆಯನ್ನು

ಅಪಹರಿಸಿಕೊಂಡು ಹೋಗಿ ರಾಮನ ವೇಷದಲ್ಲಿಯೇ ಅವಳನ್ನು ಎಂದೆಂದೂ ಭೋಗಿಸಲಾರನೇಕೆ? ಸೀತೆಗೆ ಇವನು ರಾಮನಲ್ಲವೆಂಬ ಕಲ್ಪನೆಯೇ ಬಾರದೆ ಅವಳು ಪಾತಿವ್ರತ್ಯವನ್ನು ಕಳೆದುಕೊಳ್ಳಲಾರಳೆ? ಹಾಗೆಯೇ ಅತ್ತ ರಾಮನಿ ಗಾದರೂ ಕೂಡ ಸೀತೆ ಅಪಹೃತಳಾದಳೆಂಬುದೇ ತಿಳಿಯದಂತೆ ಒಬ್ಬ ರಾಕ್ಷಸಿ ಯನ್ನು ಮಾಯಾಸೀತೆಯನ್ನಾಗಿ ಮಾಡಿ ಅವನ ಸಂಗಡ ಬಿಟ್ಟರೆ ಕಥೆ ಮುಗಿ ಯುವುದಿಲ್ಲವೆ? ರಾಕ್ಷಸರ ಮಾಯೆಗೆ ಇದು ಅಸಾಧ್ಯವೆಂತು? ಈ ಪ್ರಶ್ನೆ ಗಳನ್ನೇ ಶಕ್ತಿಭದ್ರನಿಗಿಂತ ಹಿಂದಿನ ಯಾವ ನಾಟಕಕಾರರೂ ಎತ್ತಿಲ್ಲ; ಬಿಡಿಸುವ ಯತ್ನದ ಮಾತೇ ಏಳುವುದಿಲ್ಲ. ಇದನ್ನು ಉತ್ತರಿಸದೆ ಹೋದ ಮೇಲೆ ಮುಂದೆ ಸುಂದರಕಾಂಡದಲ್ಲಿ ಸೀತೆಯು ಹನುಮಂತನನ್ನು ನಂಬುವುದು ಹೇಗೆಂಬ ಪ್ರಶ್ನೆ ಬರುತ್ತದೆ. ಅವನೂ, ಅವನು ತರುವ ಚೂಡಾಮಣಿಯೂ, ಎಲ್ಲವೂ ರಾಕ್ಷಸನ ಮಾಯೆಯಾಗಬಾರದೇಕೆ? ಮಾಯೆಯಲ್ಲವೆಂದು ಖಚಿತ ಪಡಿಸಿಕೊಳ್ಳಲು ಸೀತೆಗಿರುವ ಪ್ರಮಾಣವೇನು? ಅವಳ ಅಂತಃಕರಣ ಪ್ರವೃತ್ತಿಯೇ ಪ್ರಮಾಣವೆಂದರೆ ಸಾಕೆ? ಸಾಲದೆನ್ನಲು ಒಮ್ಮೆ ಅವಳೇ ಮೋಸ ಹೋಗಿರುವುದು ಸಾಕ್ಷಿ.

ಇದಕ್ಕಿಂತಲೂ ದೊಡ್ಡ ಸಮಸ್ಯೆ ರಾಮನು ಸೀತೆಯನ್ನು ಪರಿಗ್ರಹಿಸದೆ ಇರಲು ಅಗತ್ಯವಾಗುವ ಪ್ರಬಲ ಕಾರಣ. ಹನುಮಂತನೊಡನೆ 'ನಿನ್ನನ್ನು ಬಿಡಿಸಿಕೊಂಡು ಹೋಗಲು ಬರುತ್ತೇನೆ' ಎಂದು ಸಂದೇಶವನ್ನು ಹೇಳಿಕಳುಹಿ ಸಿದ ರಾಮನು ರಾವಣನ ವಧೆಯಾದಮೇಲೆ ಸ್ವೀಕರಿಸಲು ಹಿಂಜರಿಯುವುದು ಸಕಾರಣವಾಗಿರಬೇಡವೆ? ಅವನಿಗೆ ಅವಳ ಚಾರಿತ್ರಶುದ್ಧಿಯ ವಿಷಯದಲ್ಲಿ ಇದ್ದಕ್ಕಿದ್ದಂತೆ ಸಂದೇಹ ಬಂದಿತೆಂದರೆ ಹೇಗೆ? ಆ ಸಂದೇಹ ಬರುವುದಕ್ಕೆ ಸೀತೆಯು ಮಾಡಿದುದೇನು? ಲಕ್ಷ್ಮಣಾದಿಗಳೇ ಆಗಲಿ, ಸೀತೆಯು ಅಗ್ನಿ ಪ್ರವೇಶಮಾಡುವುದನ್ನು ಏಕೆ ತಪ್ಪಿಸಲಿಲ್ಲ?

ಹೊಸದಾಗಿ ತರ್ಕದೃಷ್ಟಿಯಿಂದ ವಿಚಾರಮಾಡುತ್ತ ಹೊರಟಾಗ, ರಾಮಾಯಣದ ಘಟನೆಗಳಲ್ಲಿ ಏಳುವ ಕೆಲವು ಪ್ರಶ್ನಪರಂಪರೆಗಳು ಇವು. ಈ ಪ್ರಶ್ನೆಗಳನ್ನು ಎತ್ತಿ, ಇವುಗಳಿಗೆಲ್ಲ ಸೂಕ್ತ ಪರಿಹಾರವನ್ನು ಕಲ್ಪಿಸಿರುವ ಕೀರ್ತಿ ಶಕ್ತಿಭದ್ರನದು. ಅವನ ಪ್ರತಿಭೆ ಇಲ್ಲಿ ಬಹಳ ವೇಗವಾಗಿ ಕೆಲಸಮಾಡಿದೆ. ನಾವು ಅತ್ಯಾಧುನಿಕ ಎಂದುಕೊಳ್ಳುವ ವಿಚಾರದೃಷ್ಟಿ ಪ್ರಾಚೀನನಾದ ಶಕ್ತಿಭದ್ರ

ನಲ್ಲಿಯೇ ಸಂಪೂರ್ಣವಾಗಿಯೇ ಗೋಚರವಾಗುತ್ತದೆ. ಎಲ್ಲ ಸಮಸ್ಯೆಗಳನ್ನೂ ಸಮರ್ಪಕವಾಗಿ ಉತ್ತರಿಸಲು ಶಕ್ತಿಭದ್ರನು ಸೃಷ್ಟಿಸಿದ ಸಾಧನವೇ ಆಶ್ಚರ್ಯ ಚೂಡಾಮಣಿ. ಆ ಹೆಸರನ್ನೇ ಅವನು ನಾಟಕಕ್ಕೂ ಇತ್ತಿರುವುದು ಅತ್ಯಂತ ಸಮಂಜಸವಾಗಿದೆ.

ಹನುಮಂತನು ಸೀತೆಯನ್ನು ಅಶೋಕವನದಲ್ಲಿ ಕಂಡು ಅವಳಿಂದ ರಾಮನ ಗುರುತಿಗೆಂದು ಚೂಡಾಮಣಿಯನ್ನು ತೆಗೆದುಕೊಂಡು ಹೋದ ವಿಷಯ ಎಲ್ಲರಿಗೂ ಗೊತ್ತಿದೆ. ಅದು ಬರಿಯ ಚೂಡಾಮಣಿ. ಅದಕ್ಕೆ ಅದ್ಭುತವಾದ ಯಾವ ಗುಣವೂ ಇಲ್ಲ. ಆದರೆ ಶಕ್ತಿಭದ್ರನ ಕಥೆಯಲ್ಲಿ ಅದು "ಆಶ್ಚರ್ಯ" ಚೂಡಾಮಣಿಯಾಗುತ್ತದೆ. ಯಾರು ಅದನ್ನು ಧರಿಸುವರೋ ಅವರ ಮೈಗೆ ಮಾಯಾವಿಗಳ ಸಂಪರ್ಕವಾದೊಡನೆ ಮಾಯಾವಿಗಳ ಮಾಯೆ ಬಯಲಾಗುತ್ತದೆ. ಅವರು ನಿಜರೂಪದಲ್ಲಿ ನಿಲ್ಲುತ್ತಾರೆ. ರಾಮನು ಸೀತೆಗೆ ಕಳುಹಿಸಿದ ಉಂಗುರವೂ ಹೀಗೆಯೇ. ನಾಟಕದಲ್ಲಿ ಅದು "ಅದ್ಭುತ" ಉಂಗುರವಾಗುತ್ತದೆ. ಅದಕ್ಕೂ ಮಾಯೆಯನ್ನು ಬಯಲಿಗೆಳೆಯುವ ಅದ್ಭುತಗುಣವುಂಟು. ಈ ಅದ್ಭುತಗುಣಗಳು ಅವಕ್ಕೆ ಹೇಗೆ ಬಂದಿತು? ಎನ್ನಬಹುದು. ಯಾವ ಮುನಿಗಳ ರಕ್ಷಣಾರ್ಥವಾಗಿ ರಾಮನು ರಾಕ್ಷಸವೈರವನ್ನು ತಂದುಕೊಂಡನೋ ಆ ಮುನಿಗಳು ಕೃತಜ್ಞತೆಯಿಂದ ರಾಮನು ರಾಕ್ಷಸರ ಮಾಯಾಜಾಲಕ್ಕೆ ಸಿಕ್ಕದಂತೆ ತಪೋಬಲದಿಂದ ಅನುಗ್ರಹಿಸಿದ ಅದ್ಭುತ ಆಭರಣಗಳೇ ಅವೆಂದು ಶಕ್ತಿಭದ್ರನು ಕಲ್ಪಿಸಿದ್ದಾನೆ. ಹೀಗೆ ಮಾಯಾನಿವಾರಣೆಯ ಸಾಧನವನ್ನು ಕಲ್ಪಿಸಿಯಾದ ಮೇಲೆ ಅದರ ಉಪಯೋಗಕ್ಕೆ ಅನುಕೂಲವಾಗುವಂತೆ ಅನೇಕ ಪ್ರಸಂಗಗಳನ್ನೂ ಕವಿ ನಿರ್ಮಿಸಿದ್ದಾನೆ :—ರಾವಣನು ಇಲ್ಲಿ ಶೂರ್ಪಣಖಿ ಸಾರಥಿಗಳೊಡನೆ ರಥದಲ್ಲಿ ರಾಮನ ಪರ್ಣಶಾಲೆಗೆ ಬರುತ್ತಾನೆ—ರಾಮಲಕ್ಷ್ಮಣರು ಮಾಯಾಮೃಗದ ಬಳಿಗೆ ಹೋಗಿರುವಾಗ. ರಾವಣ ಬರುವುದು ರಾಮನ ವೇಷದಲ್ಲಿ. ಸಾರಥಿಗೆ ಲಕ್ಷ್ಮಣನ ವೇಷ. ಶೂರ್ಪಣಖಿಯು ಮುಂದೆ ಸೀತೆಯ ವೇಷದಲ್ಲಿ ರಾಮನನ್ನು ವಂಚಿಸಲು ಅಲ್ಲಿಯೇ ಹಿಂದೆ ನಿಲ್ಲುತ್ತಾಳೆ. ಭರತನಿಗೆ ಶತ್ರುಭಯ ಬಂದಿದೆಯೆಂದೂ ಅದನ್ನು ಬೇಗ ಹೋಗಿ ನಿವಾರಿಸಬೇಕೆಂದು ಮುನಿಗಳು "ಅದ್ಭುತ" ರಥವನ್ನು ಕಳುಹಿರುವರೆಂದೂ ರಾವಣನು ನುಡಿದೊಡನೆ ಸೀತೆ ನಂಬುತ್ತಾಳೆ. ಹಾಗೆ ನಂಬುವುದಕ್ಕೆ, ನಿಜವಾಗಿಯೂ ಇದಕ್ಕೆ ಮೊದಲು

ಮುನಿಗಳು "ಅದ್ಭುತ" ವಾದ ಉಂಗುರ ಚೂಡಾಮಣಿಗಳನ್ನು ಕಳುಹಿಸಿದ್ದುದೇ ಕಾರಣ. ನಂಬಿದ ಸೀತೆಯು ತಾನಾಗಿಯೇ ರಥದಲ್ಲಿ ಕುಳಿತುಕೊಳ್ಳುತ್ತಾಳೆ. ರಾವಣನು ಅವಳನ್ನು ಆಗಲೇ ಮುಟ್ಟುವುದಿಲ್ಲವಾದ್ದರಿಂದ ಅವಳ ತಲೆಯಲ್ಲಿಯೇ ಚೂಡಾಮಣಿಯಿದ್ದರೂ ಮಾಯೆ ಬಯಲಾಗುವುದಿಲ್ಲ. ಮುಂದೆ ಎಷ್ಟೋ ಹೊತ್ತಿನ ಮೇಲೆ ಅವನು ಅವಳನ್ನು ಮುಟ್ಟಿದಾಗ ಮಾತ್ರ ನಿಜ ತಿಳಿಯುತ್ತದೆ.

ಹಾಗೆಯೇ ಅತ್ತ ರಾಮನು ಹಿಂದಿರುಗಿ ಬಂದಮೇಲೆ ಶೂರ್ಪಣಖೆ ಸೀತೆಯ ವೇಷದಲ್ಲಿದ್ದರೆ, ಅವನಿಗೆ ಸ್ವಲ್ಪಕಾಲ ನಿಜದ ಅರಿವಾಗುವುದೇ ಇಲ್ಲ. ಅವಳನ್ನು ಸಂತೈಸಲೆಂದು ಮುಟ್ಟಿದಾಗ ಉಂಗುರದ ಪ್ರಭಾವದಿಂದ ಅವಳು ರಾಕ್ಷಸಿಯಾಗುತ್ತಾಳೆ. ಇಷ್ಟೇ ಸಾಲದೆಂಬಂತೆ, ಲಕ್ಷ್ಮಣನೂ ಇನ್ನೊಂದು ಕಡೆ ಮಾಯಾರಾಮನ ರೂಪಿನಲ್ಲಿ ಗತಪ್ರಾಣನಾಗಿರುವ ಮಾರೀಚನಿಂದ ವಂಚಿತನಾಗುತ್ತಾನೆ. ಅವನು ನಿಜವಾದ ರಾಮನನ್ನೇ ಕೊಲ್ಲಬೇಕೆಂದು ಕೂಡ ಸಿದ್ಧನಾಗುತ್ತಾನೆ. ಆಗಲೂ ಉಂಗುರದ ಪ್ರಭಾವದಿಂದಲೇ ನಿಜ ಸ್ಥಿತಿಯು ತಿಳಿಯುತ್ತದೆ. ಈ ಎಲ್ಲ ಘಟನೆಗಳೂ ನಾಟಕದ ಮಧ್ಯವರ್ತಿಯಾದ ಮೂರನೆಯ ಅಂಕದಲ್ಲಿ ಬರುತ್ತವೆ. ನಾಟಕದ ಸ್ವಾರಸ್ಯದ ಕೇಂದ್ರವೇ ಆ ಅಂಕ. ಮುಂದೆ ಹನುಮಂತನು ನಿಜವೆಂದರಿಯುವುದಕ್ಕೂ, ನಿಜವಾದ ರಾಮನನ್ನರಿಯುವುದಕ್ಕೂ ಈ ಅದ್ಭುತ ಆಭರಣಗಳೇ ಸೀತೆಗೆ ಸಹಾಯವಾಗುತ್ತವೆ. ಹೀಗೆ ಎರಡು ಆಭರಣಗಳಿಗೂ "ಅದ್ಭುತ" ಶಕ್ತಿಯನ್ನು ಕಲ್ಪಿಸಿದ ಕಾರಣ ರಾಮಸೀತೆಯರು ಅವುಗಳನ್ನು ವಿನಿಮಯ ಮಾಡಿದಾಗಲೂ ತೊಂದರೆ ಬರುವುದಿಲ್ಲ.

ಇನ್ನು ಸೀತೆಯ ವಿಷಯದಲ್ಲಿ ರಾಮನ ಸಂದೇಹಕ್ಕೆ ಕಾರಣಕಲ್ಪನೆಯನ್ನು ಕುರಿತು ಒಂದು ಮಾತು. ಆ ಸಂದೇಹ ರಾಮನಲ್ಲಿ ಇದ್ದಕ್ಕಿದ್ದಂತೆ ಕಡೆಗೆ ಬರಲಿಲ್ಲ; ಸೀತಾಪಹರಣಕ್ಕೂ ಮೊದಲೇ ಬಂದಾಗಿತ್ತೆನ್ನುವುದು ಶಕ್ತಿಭದ್ರನ ಉತ್ತರ. ಏಕೆ ಬಂದಿತೆಂದರೆ, ರಾಮನಿಗೆ ತಿಳಿಯದೆ ಇದ್ದಂತೆ ಅನಸೂಯೆ ಸೀತೆಗೆ ಕೊಟ್ಟಿದ್ದ ವರದ ಫಲವಾಗಿ. ವಿಧಿವಿಪರ್ಯಾಸದಿಂದ ಸೀತೆಗೆ ವರವೇ ಶಾಪರೂಪವಾಯಿತು. 'ನೀನು ಕಾಡಿನಲ್ಲಿ ಹೇಗೆಯೇ ಇದ್ದರೂ ಎಲ್ಲಾ ಶೃಂಗಾರವನ್ನೂ ಮಾಡಿಕೊಂಡವಳಂತೆ ರಾಮನಿಗೆ ಕಾಣಿಸುತ್ತಿರು' ಎಂಬುದೇ ಆ ವರ.

ಸೀತೆಯ ಆ ಬಾಹ್ಯಶೃಂಗಾರದ ಚಿಹ್ನೆಗಳಿಂದ ಒಮ್ಮೊಮ್ಮೆ ಸೀತೆಯ ಚಾರಿತ್ರದ ವಿಷಯದಲ್ಲಿ ಸಂದೇಹ ಮೂಡುತ್ತಿತ್ತು. ಅದು ಅತಿಪ್ರಬಲವಾಗಲು ವಿರಹಿಣಿಯ ವ್ರತಕ್ಕೂ ಶೃಂಗಾರಕ್ಕೂ ತಾಳಮೇಳವೇ ಇಲ್ಲದ್ದು ಕಾರಣ.

ಭಾಸನ ಪ್ರತಿಮಾ ನಾಟಕದಲ್ಲಿರುವಂತೆ ಇಲ್ಲಿಯೂ ನಾಟಕದ ಆರಂಭದಲ್ಲಿ ಕೈಕೆಯ ಪಾತ್ರವನ್ನು ನಿರ್ದುಷ್ಟವೆಂದು ಪ್ರತಿಪಾದಿಸುವ ಪ್ರಯತ್ನ ನಡೆದಿದೆ. ದಶರಥನ ಮರಣಕ್ಕೆ ಅವನ ಶಾಪವೇ ಕಾರಣವೆನ್ನಲಾಗಿದೆ. ಶೂರ್ಪಣಖಾವೃತ್ತಾಂತವು ಬಹಳ ಮನೋರಂಜಕವಾಗಿ ಬಂದಿರುವುದಲ್ಲದೆ ಮುಂದೆ ರಾವಣನನ್ನು ಕರೆತರಲು ಕಾರಣವಾಗಿಯೂ ಪ್ರದರ್ಶಿತವಾಗಿದೆ. ಯುದ್ಧಕಾಂಡದ ವಿವರಗಳು ಲುಪ್ತವಾಗಿವೆ. ಕಡೆಗೆ ಅಗ್ನಿದೇವ, ಇಂದ್ರಾದಿಗಳು, ಋಷಿಗಳು, ಪಿತೃಗಳು—ಇವರ ಸಾಕ್ಷ್ಯದಿಂದ ಸೀತೆಯ ಮೇಲಿನ ಸಂಶಯ ತೊಲಗಿ ನಾಟಕವು ಸುಖಾಂತವಾಗಿ ಮುಗಿಯುತ್ತದೆ.

ಹೀಗೆ 'ಆಶ್ಚರ್ಯ ಚೂಡಾಮಣಿ' ನಾಟಕದ ಕಥಾಸಂವಿಧಾನದಲ್ಲಿ ನೂತನತೆಯಿದೆ, ಸಾಮಂಜಸ್ಯವಿದೆ, ಔಚಿತ್ಯವಿದೆ. ಇದು ರಾಮಾಯಣದ ಕಥೆಯ ಕೇವಲ ಸಂಗ್ರಹವಲ್ಲ; ನಾಟಕೋಚಿತವಾದ ಅಂಶಗಳ ಪುನರ್ನಿರ್ಮಾಣ !

**೨. ಪಾತ್ರಪರಿಪುಷ್ಟಿ :**

ಅದ್ಭುತರಸವನ್ನು ಕೇಂದ್ರದಲ್ಲಿಟ್ಟು ಯೋಜಿತವಾಗಿರುವ ನಾಟಕದಲ್ಲಿ ಪಾತ್ರಪ್ರಕಟನೆಗಿಂತಲೂ ಕಥಾರಚನೆಯ ಕಡೆಗೇ ಕವಿಯ ಲಕ್ಷ್ಯ ಹೋಗುವುದು ಸ್ವಾಭಾವಿಕ. ಆದರೂ ಶಕ್ತಿಭದ್ರನು ಉಳಿದ ರಸ, ರಸಾಭಾಸಗಳಿಗೂ ಇಲ್ಲಿ ಸಮಯೋಚಿತವಾಗಿ ಎಡೆಯಿತ್ತಿರುವುದರಿಂದ ಪಾತ್ರಪುಷ್ಟಿಯಲ್ಲಿ ತುಂಬಾ ನ್ಯೂನತೆಯಿರುವಂತೆ ಎದ್ದು ಕಾಣುವುದಿಲ್ಲ. ನಾಟಕದ ಆರಂಭದಲ್ಲಿ ಲಕ್ಷ್ಮಣನು ಭ್ರಾತೃಕಿಂಕರನಾದ ಆದರ್ಶ ಅನುಜನಾಗಿ ಬರುತ್ತಾನೆ. ನಾಟಕದ ಕಡೆಯವರೆಗೂ ಹಾಗೆಯೇ ಉಳಿಯುತ್ತಾನೆ. ಶೂರ್ಪಣಖೆಯ ಮಾಯಾರೂಪರಾಶಿಗೆ ವಿವಶನಾಗುವುದಿಲ್ಲ. ಮುಂದೆ ಸೀತೆಯ ವಾಗ್ಬಾಣಗಳಿಗೆ ಗುರಿಯಾದರೂ ತನ್ನ ಕರ್ತವ್ಯಪಾಲನೆಯ ವ್ರತವನ್ನು ಶಕ್ತಿಮೀರಿ ನಡೆಸಲು ಹೆಣಗುತ್ತಾನೆ. ರಾಮನು ಸತ್ತನೆಂದು ಭ್ರಮಿಸಿ ತಾನೂ ಸಾಯಲು ಸಿದ್ಧನಾಗುತ್ತಾನೆ.

ಕಡೆಗೆ ಸಂಶಯಾಸ್ಪದಳಾದ ಸೀತೆಯನ್ನು ಅಗ್ನಿಪರೀಕ್ಷೆಮಾಡಿದಲ್ಲದೆ ಅವನಿಗೆ ತೃಪ್ತಿಯಿಲ್ಲ. ಅದಕ್ಕೆ ಅವನ ಭ್ರಾತೃಗೌರವವೇ ಕಾರಣ. ರಾಮನ ಪ್ರೇಮವೆಂಬ ಹುಚ್ಚುಹೊಳೆಯಲ್ಲಿ ಅವನು ಮತ್ತೆ ಯಾರನ್ನೂ ಲೆಕ್ಕಿಸುವುದಿಲ್ಲ. ಕೈಕೆಯನ್ನು ಬಾಯಿಗೆ ಬಂದಂತೆ ನಿಂದಿಸುತ್ತಾನೆ. ಆದರೆ ಅಣ್ಣನ ಮಾತಿಗೆ ಹಿಂದೆ ಮುಂದೆ ಹೇಳದ ವಿಧೇಯತೆ ಅವನಲ್ಲಿ ಯಾವಾಗಲೂ ಮರೆಯಾಗುವುದಿಲ್ಲ. ಅವನ ಪರಾಕ್ರಮವು ಕೂಡ ಸಣ್ಣದಲ್ಲ. ಇತ್ತ ಶೂರ್ಪಣಖೆಯನ್ನು ಅತ್ತ ಇಂದ್ರಜಿತುವನ್ನು ಸಂಹಾರಮಾಡಿದ ವೀರನೇ ಅವನು.

ನಾಟಕಕ್ಕೆ ನಾಯಕ ಶ್ರೀರಾಮ. ಅವನ ಗುಣೋನ್ನತಿ ಪ್ರತಿಯೊಂದು ಅಂಕದಲ್ಲೂ ನಿದರ್ಶನಕ್ಕೆ ಬರುತ್ತದೆ. ವನವಾಸವನ್ನೇ ಗುಣವೆಂದು ಭಾವಿಸಿ ಧರ್ಮಸಂಗ್ರಹಕ್ಕೆ ನಿರತನಾದ ಮಹಾತ್ಮ ಅವನು. ಆದರೆ ಅವನಲ್ಲಿ ಹಾಸ್ಯ ಪ್ರವೃತ್ತಿಯೂ ಉಂಟು, ಏಕಪತ್ನೀವ್ರತವೂ ಉಂಟೆನ್ನಲು ನಾಟಕದಲ್ಲಿ ಅನೇಕ ಪ್ರಸಂಗಗಳು ಬರುತ್ತವೆ. ಶೂರ್ಪಣಖೆಯೊಡನೆ ಅವನ ಸಂಭಾಷಣೆಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅವನ ರೂಪಶ್ರೀಯಿಂದ ರಾಕ್ಷಸಿಯೂ ಕಾಮಿಸಿಬಂದರೆ, ಅವನ ಪ್ರತಾಪಶ್ರೀಯನ್ನು ನೋಡಿ ಇಂದ್ರಾದಿಗಳನ್ನೇ ಜಯಿಸಿದ ರಾವಣನು ಮೋಹಗೊಳ್ಳುವನು. ಸೀತೆಯೆಂದರೆ ಅವನಿಗೆ ಪ್ರಾಣ. ಅವಳನ್ನು ಅಗಲಿ ಕ್ಷಣವೂ ಇರಲಾರನು. ಸೀತಾರಾಮರ ಶೃಂಗಾರದ ಒಂದು ಸುಂದರ ಶಬ್ದಚಿತ್ರವು ಅವನು ಸೀತೆಗೆ ಕಳುಹಿಸುವ ಸಂದೇಶದಲ್ಲಿ ಬಂದಿದೆ. (vi–೧೮) ರಾಮನ ವಿಪ್ರಲಂಭಶೃಂಗಾರವನ್ನು ಶಕ್ತಿಭದ್ರನು ಇಡಿಯ ಆರನೆಯ ಅಂಕದ ಉದ್ದಕ್ಕೂ ಚಿತ್ರಿಸಿದ್ದಾನೆ. ರಾವಣವಿಜಯವು ಅವನ ವಿಕ್ರಮದ ಒಂದು ಪ್ರತೀಕ. ಸುಗ್ರೀವ ವಿಭೀಷಣಾದಿಗಳ ಭಕ್ತಿವಿಶ್ವಾಸಗಳು ಅವನ ಮಹಿಮೆಯ ಕುರುಹು. ರಾಮನೇ ಮಹಾವಿಷ್ಣುವಿನ ಅವತಾರವೆಂದು ಶಕ್ತಿಭದ್ರನು ಭಾವಿಸಿದ್ದಾನೆ. 'ಲೀಲಾಮಾನುಷ ವಿಗ್ರಹ'ನಾದುದರಿಂದ ಅವನೂ ಕ್ಷಣಕಾಲ ರಾಕ್ಷಸರ ಮಾಯೆಗೆ ತುತ್ತಾಗಬೇಕಾಯಿತು; ಅಷ್ಟೆ. ಸೀತೆಯ ವಿಷಯದಲ್ಲಿ ಸಂಶಯ ಬಂದಮೇಲೆ ಅದನ್ನು ಪರೀಕ್ಷಿಸದೆ ಬಿಡುವವನಲ್ಲ. ಯಾವುದರಲ್ಲೂ ಅವನ ನಿರ್ಧಾರ ದೃಢವಾದುದು.

ಸೀತೆ ನಾಟಕಕ್ಕೆ ನಾಯಿಕೆ. ಅವಳು ಪತಿವ್ರತಾಶಿರೋಮಣಿ. ಅವಳಿಂದಲೇ ರಾಮಾಯಣದ ಕಥೆ ರಾವಣನ ಸಂಹಾರದವರೆಗೂ ಬೆಳೆಯಿತು. ಅವಳದು

ಋಜುಸ್ವಭಾವ. ಮೋಸವನ್ನು ಕಂಡರಿಯಳು. ಸುಂದರಿಯ ರೂಪದಲ್ಲಿ ಶರಣು ಬಂದ ಶೂರ್ಪಣಖಿಯನ್ನು ಕಂಡು ಕನಿಕರಪಡುವಳು. ರಾಮನ ಪ್ರೇಮದ ವಿಷಯದಲ್ಲಿ ಅವಳಿಗೆ ಸಂಶಯಲೇಶವೂ ಇಲ್ಲ. ರಾಮನೆಂದೇ ಭ್ರಮಿಸಿ ರಾವಣ ನಿಂದ ಅಪಹೃತೆಯಾಗುವಳು. "ಸ್ತ್ರೀಯನ್ನು ಪಾತಿವ್ರತ್ಯ ರಕ್ಷಿಸೀತೇ ಹೊರತು ಬಾಣವಲ್ಲ!" ಎಂಬ ಅವಳ ಮನೋದಾರ್ಢ್ಯದ ಪರೀಕ್ಷೆ ನಾಟಕದಲ್ಲಿ ನಡೆಯು ತ್ತದೆ. (ಲಕ್ಷ್ಮಣನನ್ನೇ ಬಿರುನುಡಿಗಳಿಂದ ನೋಯಿಸುತ್ತಾಳೆ.) ಪರೀಕ್ಷೆಯಲ್ಲಿ ಅವಳು ಉತ್ತೀರ್ಣಳಾಗುತ್ತಾಳೆ. ರಾವಣನ ಸ್ವರ್ಗಸುಖಾಮಿಷಗಳನ್ನು ತೃಣೀಕರಿಸಿ ರಾಮನ ವಿರಹದಲ್ಲಿ ಹುಚ್ಚಿಯಾಗುತ್ತಾಳೆ. ತನ್ನ ಪತಿ ಸಂಶಯ ಪಟ್ಟರೂ ಕೋಪಿಸದ ಸರ್ವಂಸಹೆಯ ಕನ್ಯೆ ಸೀತೆ. ಅವಳ ಭಾವಶುದ್ಧಿಯೇ ನಾಟಕಾಂತ್ಯದಲ್ಲಿ ದೇವಋಷಿಗಣಗಳನ್ನೆಲ್ಲ ಪ್ರತ್ಯಕ್ಷವಾಗಿ ಕರೆತರುತ್ತದೆ.

ಪ್ರತಿನಾಯಕನಾದ ರಾವಣ ಕಾಮಾಂಧ, ಮದೋದ್ಧತ. ಅವನಿಗೆ ಧರ್ಮ, ಅರ್ಥಗಳು ಪುರುಷಾರ್ಥಗಳೇ ಅಲ್ಲವೆನಿಸುವಂತೆ ಲೋಕೈಕವಿಜಯಿಯಾ ಗಿದ್ದಾನೆ. ಸೀತೆಯನ್ನು ಸಾಮಾನ್ಯಸ್ತ್ರೀಯಂತೆ ಭಾವಿಸಿದುದು ಅವನ ಅನರ್ಥಕ್ಕೆ ಮೂಲವಾಯಿತು. ಮಂತ್ರಿಗಳೊಡನೆ ಅವನು ಆಡುವುದು ಕಾಮವಿಚಾರ. ಸೀತೆಯನ್ನೊಲಿಸಲು ಅವನ ಸಕಲಪ್ರಯತ್ನಗಳೂ ವ್ಯರ್ಥವಾದಾಗ ಸ್ತ್ರೀ ಹತ್ಯೆಗೂ ಸಿದ್ಧನಾಗುತ್ತಾನೆ. ಅವನಲ್ಲಿ ಯಾವ ಸುಗುಣದ ಲವಲೇಶವನ್ನೂ ಕವಿ ತೋರಿಸಲೆತ್ನಿಸಿಲ್ಲ. ಜಗತ್ಕಂಟಕನೆಂಬುದೊಂದೇ ಎದ್ದು ನಿಲ್ಲುವ ಅಂಶ. ಅವನ ವಧೆಗೆ ಅಳುವವರು ಯಾರೂ ಇಲ್ಲ.

ಉಳಿದ ಪಾತ್ರಗಳಲ್ಲಿ ಹನುಮಂತನು ಆದರ್ಶದೂತನಾಗಿ, ಮಂಡೋ ದರಿಯು ರಾಕ್ಷಸನ ಪತ್ನಿಯಾದರೂ ಗುಣಾನ್ವಿತೆಯಾಗಿ ಚಿತ್ರಿತರಾಗಿದ್ದಾರೆ. ಶೂರ್ಪಣಖಿಯು ರಾವಣನಿಗೆ ತಕ್ಕ ತಂಗಿ. ಅವಳಿಗೆ ಇನ್ನೊಬ್ಬರನ್ನು ಹಾಳು ಮಾಡುವುದರಲ್ಲಿಯೇ ಆನಂದ. ಮಾರೀಚನು ಮುನಿಯಾದರೂ ರಾವಣನ ಭಯಕ್ಕೆ ಮಣಿಯುವವನು.

## ೪. ಶಕ್ತಿಭದ್ರನ ಶೈಲಿ :

ಸಂಸ್ಕೃತ ನಾಟಕದ ಇತಿಹಾಸದಲ್ಲಿ ಕಡೆಕಡೆಗೆ ಬರೆದ ನಾಟಕಗಳೆಲ್ಲವೂ— ಉದಾಹರಣೆಗೆ ಮುರಾರಿಯ ಅನರ್ಘರಾಘವ—ವರ್ಣನಾಪ್ರಧಾನವಾದ

ಚಂಪೂಕಾವ್ಯಗಳೋ ಎನ್ನುವಂತಿರುತ್ತವೆ. ಪಾಂಡಿತ್ಯಪ್ರದರ್ಶನಕ್ಕಾಗಿಯೋ ಎನ್ನುವಂತೆ ಅಪ್ರಸಿದ್ಧ ಶಬ್ದಪ್ರಯೋಗಗಳೂ ಸೂಕ್ಷ್ಮದುಷ್ಕರಾಲಂಕಾರಗಳೂ ಅವುಗಳಲ್ಲಿ ತುಂಬಿರುತ್ತವೆ. ಭಾಸನ ಕೃತಿಗಳು ಹೇಗೆ ಈ ಪ್ರವೃತ್ತಿಯಿಂದ ಮುಕ್ತವಾಗಿವೆಯೋ ಹಾಗೆಯೇ ಶಕ್ತಿಭದ್ರನ ನಾಟಕವೂ ಮುಕ್ತವಾಗಿದೆ. ಇಂದೂ ರಂಗಸ್ಥಳದಮೇಲೆ ಅಭಿನಯಿಸಿದರೆ ನಾಟಕ ಪರಿಣಾಮಕಾರಿಯಾಗುವಂತೆ ಸಂಭಾಷಣೆಗಳು ಬಂದಿವೆ. ಗದ್ಯದಲ್ಲಿ ಆಡುನುಡಿಗಳ, ಗಾದೆ ಮಾತುಗಳ, ಬೆಡಗು ಮನಸ್ಸನ್ನು ಸೆಳೆಯುವಂತೆ ಪದ್ಯಗಳ ಸರಳ ಸೌಕುಮಾರ್ಯವೂ ರಮಣೀಯವಾಗಿದೆ. ಶೂರ್ಪಣಖೆ–ರಾಮ ಲಕ್ಷ್ಮಣರು, ಸೀತೆ–ಹನುಮಂತ, ರಾವಣ–ಮಂತ್ರಿ, ಇವರ ಸಂಭಾಷಣೆಗಳು ಸರಸವಾಗಿಯೂ ಸಹಜವಾಗಿಯೂ ಇರುವುವಲ್ಲದೆ ಚಮತ್ಕಾರದಿಂದಲೂ ತುಂಬಿವೆ. ಪರಿಹಾಸ, ಕಟಕಿ, ವಿಡಂಬನೆಗಳಲ್ಲಿಯೂ ಶಕ್ತಿಭದ್ರನು ಸಿದ್ಧಹಸ್ತನೆಂಬುದನ್ನು ಕಡೆಯ ದೃಶ್ಯದಲ್ಲಿ ಸೀತೆಯ ಬಗೆಗೆ ಸಂದೇಹಪಡುವ ರಾಮನ ಮಾತುಗಳಲ್ಲಿ ಕಾಣಬಹುದು. ರಸಕ್ಕಿಂತ ರಸಾಭಾಸ —ಶೂರ್ಪಣಖೆಯ ಪ್ರಣಯ, ರಾವಣನ ಕಾಮಾವೇಶ, ಇತ್ಯಾದಿ —ವೇ ರಂಗಭೂಮಿಯಮೇಲೆ ಬಹುಜನಪ್ರಿಯವಾಗುವುದೆಂಬುದನ್ನು ಬಲ್ಲ ಶಕ್ತಿಭದ್ರನು ಅವನ್ನು ಬಹಳ ಮನೋಜ್ಞವಾಗುವಂತೆ ಚಿತ್ರಿಸಿದ್ದಾನೆ. ದೀರ್ಘ ಸಮಾಸಗಳಾಗಲಿ, ಕ್ಲಿಷ್ಟಕಲ್ಪನೆಗಳಾಗಲಿ, ಅಪ್ರಸಿದ್ಧ ಕವಿಸಮಯಗಳಾಗಲಿ, ಇಲ್ಲದೆ ಶಕ್ತಿಭದ್ರನ ಶೈಲಿಯು ಹಿತಮಿತಮೃದುಮಂಜುಳ ಗತಿಯಿಂದ ಸಾಗುತ್ತದೆ. ಕಾಳಿದಾಸಾದಿಗಳ ಶ್ಲೋಕಗಳನ್ನು ಅನುಸರಿಸಿದರೂ ಅವಕ್ಕೆ ತನ್ನದೇ ಆದ ಭಂಗಿಯನ್ನು ಕೊಡಬಲ್ಲನು. ನಾಟಕದಲ್ಲಿ ಪತಾಕಾಸ್ಥಾನ (Dramatic Irony) ಗಳೂ ಹೃದಯಂಗಮವಾಗಿ ಬರುತ್ತವೆ. ಉದಾಹರಣೆಗೆ ಸೀತೆಯು ರಾವಣನ ಮಾಯಾಜಾಲದಲ್ಲಿ ಪೂರ್ಣವಾಗಿ ಸಿಕ್ಕಿಕೊಂಡಾಗ ಮಾಯೆಯಿಂದ ಬಿಡುಗಡೆಯಾಯಿತೆಂದು ಸಮಾಧಾನಪಟ್ಟುಕೊಳ್ಳುವುದನ್ನು ತೋರಿಸಬಹುದು. ಒಟ್ಟಿನಮೇಲೆ ಶಕ್ತಿಭದ್ರನು ನಾಟಕತಂತ್ರದಲ್ಲಿ ನಿಪುಣನೆಂದು ಹೇಳಿ ಈ ವಿಮರ್ಶೆಯನ್ನು ಮುಗಿಸಬಹುದು. ಮಾನವಸ್ವಭಾವದ ಆಳಗಳನ್ನು ಶಕ್ತಿಭದ್ರನು ತೋರಿಸಲಾರನಾದರೂ, ಅದರ ಮೇಲಿನ ಪದರಗಳನ್ನು ಸ್ವಾರಸ್ಯವಾಗಿ ಚಿತ್ರಿಸಬಲ್ಲ ಅವನ ಶಕ್ತಿ ಸಣ್ಣದಲ್ಲ.



# ಆಶ್ಚರ್ಯ ಚೂಡಾಮಣಿ

## ಮೊದಲನೆಯ ಅಂಕ

(ನಾಂದಿಯಾದಮೇಲೆ ಸೂತ್ರಧಾರನ ಪ್ರವೇಶ)

ಸೂತ್ರಧಾರ—

ಅಲೆಗಳೋಳಿಯು ಬದಲು ಮರಕತ ಪರಿಘಗಳ ನೀಳ್ಕರಿಸುವ
ತೋಳ ಸಾಸಿರವೆಸೆದಿರೆ;
ಹಾರಜಾಲಗಳಾಗೆ ನೊರೆಗಳನಂತಫಣಿ ಮಾಣಿಕ್ಯದಾ
ಬೆಳಕೆ ಕೆಂಪನು ಬೆಸೆದಿರೆ;
ಒಳಗೆ ಶಂಖವ, ಚರವನಚರವನಾಂತು ನಂದದ ತೇಜವ;
ಪಿಡಿದು ಕೈಯೊಳು ಶಾರ್ಙ್ಗವ,
ಕಡಲಿನೊಂದೆಡೆ ಪವಡಿಸುತ್ತಿಹ ಕಡಲೆಯೆನಿಸುವ ದೇವನು
ಪೊರೆಯಲೆಮ್ಮನು ಆತನು ||೧||

(ನಡೆಯುತ್ತಾ, ನೇಪಥ್ಯದ ಕಡೆಗೆ ತಿರುಗಿ)

ಆರ್ಯೆ, ಇತ್ತ ಬಾ.

(ನಟಿಯ ಪ್ರವೇಶ)

ನಟಿ—ಆರ್ಯ, ಇದೋ ಬಂದೆ.

ಸೂತ್ರಧಾರ—ಆರ್ಯೆ,

ನರರಂ ಮೆಚ್ಚಿಸಲಪ್ಪುದು
ಗುರುಶಿಕ್ಷೆಯಿನಂತೆ ಮಿತ್ರರೆಲ್ಲರ ನೆರವಿಂ।
ಹೊರೆಯಿದು ಪಿರಿದೆನಲಾಂತೆಂ
ದೊರೆವೊಲಣಂ ಮುನ್ನಮಾಂತುದಂ ಭರತಾದ್ಯರ್ ||೨||

ನಟಿ—ಆರ್ಯನ ಕಾರ್ಯದ ಮಹತ್ತ್ವವನ್ನು ಮುಖಭಾವವೇ ತೋರಿಸುತ್ತದೆ.

ಸೂತ್ರಧಾರ—ದುರ್ಗಮವಾದ ಮಾರ್ಗವು ಬಹುಜನರಿಗೆ ಅಸಾಧಾರಣ;
ಅಲ್ಲವೆ, ನಲ್ಲೆ?

ನಟಿ—ಅಸಾಧಾರಣವೇನೋ ತಿಳಿಯಲಿಲ್ಲ.

ಸೂತ್ರಧಾರ—"ದಕ್ಷಿಣಾಪಥದಿಂದ ಬಂದಿರುವ 'ಆಶ್ಚರ್ಯಚೂಡಾಮಣಿ' ಎಂಬ ನಾಟಕವನ್ನು ಅಭಿನಯಿಸಿ ಅದರ ಸೊಗಸು ಇಮ್ಮಡಿಸುವಂತೆ ಮಾಡಬೇಕು" ಎಂದು ಮಹಾಜನರ ಅಪ್ಪಣೆಯಾಗಿದೆ.

ನಟಿ—ಇದೊಂದು ದೊಡ್ಡ ಸೋಜಿಗವೇ ಸರಿ! ದಕ್ಷಿಣದೇಶದಿಂದ ನಾಟಕವು ಬರುವುದೆಂದರೆ ಆಕಾಶದಿಂದ ಹೂವರಳಿದಂತೆ ಅಥವಾ ಮರಳಿನಿಂದ ಎಣ್ಣೆ ಬಂದಂತೆಯೇ!

ಸೂತ್ರಧಾರ—ಆರ್ಯೆ, ಹಾಗೆನ್ನಬೇಡ. ಗುಣವನ್ನು ಸ್ವೀಕರಿಸು; ಅದರ ಜನ್ಮದೇಶದ ಬಗೆಗೆ ದುರಾಗ್ರಹವನ್ನು ಬಿಡು. ನೋಡು—

ಬೆಲೆಯಿಹುದು ಗುಣಗಳಿಗೆ ದಿಗ್ಭಾಗಕಲ್ತು,
ದೃಷ್ಟಾಂತವಿದಕಿಲ್ಲೆ ಕಾಣುತ್ತಲಿಹುದು;
ನಿನ್ನ ಕುಚದೆಡೆಯೆಸೆವ ಚಂದನವು ಕೆಂಪು
ಹಾರವೋ ಸೀಹಾರಕಾಂತಿಯೊಲು ಬಿಳಿದು ॥ ೩ ॥

ನಟಿ—ಅದೂ ನಿಜ. ಆ ದೇಶ ರತ್ನಗಳಿಗೆ ಆಗರ. ಆರ್ಯ, ತನ್ನ ಪ್ರತಿಭೆಯನ್ನು ನಾಟಕದ ಮುಖಾಂತರ ದೇಶಾಂತರಕ್ಕೆ ಕಳುಹಿಸಬೇಕೆಂದಿರುವ ಆ ಕವಿಯಾರೆಂಬುದನ್ನು ಹೇಳು.

ಸೂತ್ರಧಾರ—ಆರ್ಯೆ, ಕೇಳು. "ಉನ್ಮಾದವಾಸವದತ್ತಾ" ಮುಂತಾದ ಕಾವ್ಯಗಳನ್ನು ರಚಿಸಿ ವಿಖ್ಯಾತನಾಗಿರುವ ಶಕ್ತಿಭದ್ರನೆಂಬ ಕವಿಯ ಪ್ರತಿಭಾವಿಲಾಸವೇ ಇದು. ಆದುದರಿಂದ ನೀನೂ ಪಾತ್ರದ ಏರ್ಪಾಡನ್ನು ಗಮನಿಸು. ನಾನು ಮಹಾಜನರಿಗೆ ವಿಜ್ಞಾಪಿಸಿಕೊಳ್ಳುತ್ತೇನೆ. ಓ, ಇದೇನಿದು? ನಾನು ವಿಜ್ಞಾಪನೆ ಮಾಡುವಷ್ಟರಲ್ಲಿಯೇ ಏನೋ ಶಬ್ದ ಕೇಳಿಸಿದಂತಾಗುತ್ತಿದೆ! ಇರಲಿ, ನೋಡಿಬರುತ್ತೇನೆ.

(ನೇಪಥ್ಯದಲ್ಲಿ ಬಿಲ್ಲಿನ ಟಂಕಾರ)

ಸೂತ್ರಧಾರ—ಹೋ, ತಿಳಿಯಿತು.

ಕಾಡೊಳು ಸತಿಯೊಡನಿರುವಾ ರಾಮನ
ವಾಸಕೆ ಕುಟಿಯನು ನಿರ್ಮಿಸಲು।

ಬಿಲ್ದನಿಯಿಂದಲೆ ಕಾಡಿನ ಮೃಗಗಳ-
ನೋಡಿಸುತಿರುವನು ಲಕ್ಷ್ಮಣನು ॥ ೪ ॥
(ನಿಷ್ಕ್ರಮು)

**ಇದು ಸ್ಥಾಪನೆ**

---

(ಬಿಲ್ಲುಬಾಣಗಳನ್ನು ಹಿಡಿದ ಲಕ್ಷ್ಮಣನ ಪ್ರವೇಶ)

ಲಕ್ಷ್ಮಣ—

ಬಿಲ್ದನಿಯಿಂದಲೆ ಭೀಕರಮೃಗಗಳನಟ್ಟುವೆನಿಲ್ಲಿಂ ದೂರಕಿದೊ
ಎಲೆಗಳಿನಿಲ್ಲಿಯೆ ಕುಟಿಯನು ನಿರ್ಮಿಸಿ ಹೂವಿಂ ಗೈವೆನು ಹಾಸಿಗೆಯ ;
ಬೆತ್ತಗಳೆಳೆಯಿಂ ಹೆಣೆಯುವೆನೊಡನೆಯೆ ಯತಿಗಳಿಗೊಪ್ಪುವ ಚಾಪೆಯನು
ನವಕಮಲಂಗಳ ರಜದಿಂದಡ್ಡಿದ ನೀರಿಂ ತಳಿವೆನು ಭೂಮಿಯನು ॥ ೫ ॥

(ಹಾಗೆ ಮಾಡಿ) ಅಂತೂ ಆರ್ಯನ ಅಪ್ಪಣೆಯನ್ನು ನೆರವೇರಿಸಿದ್ದಾಯಿತು. ನಿಜ, ಕಷ್ಟದೆಸೆಯಲ್ಲಿರುವವರ ಬುದ್ಧಿ ಬಹಳ ಚುರುಕು. ಪರ್ಣಶಾಲೆಯು ಸಿದ್ಧವಾಗಿದೆಯೆಂದು ಅಣ್ಣನಿಗೆ ತಿಳಿಸಿಬರುತ್ತೇನೆ. ಅಣ್ಣನೀಗ ಅತ್ತಿಗೆಯೊಡನೆ ಗೋದಾವರಿಯ ತೀರದಲ್ಲಿ ಕುಳಿತುಕೊಂಡು, ನಡೆದುಬಂದ ಆಯಾಸ ಹೋಗುವಂತೆ ತಂಗಾಳಿಯನ್ನು ಸೇವಿಸುತ್ತಿರುವನು. (ನಡೆಯುತ್ತಾ, ಮುಂದೆ ನೋಡಿ)

ಓ, ಅರಣ್ಯದಲ್ಲಿ ಅತ್ಯಂತ ಅನಿರೀಕ್ಷಿತವಾದ ಈ ರೂಪವಾವುದು ?—

ನೀಳವೆನೆ ನೋಟವನು ಹುಬ್ಬಿನಿಸು ಬಾಗಿಹುದು
ಸುಸ್ತನವು ಸೊಬಗನ್ನು ಸೂಸುತಿಹುದು ;
ಆಶ್ಚರ್ಯರತ್ನವಿದು ಬೆಡಗುಗಳ ಬೀಡೆನಲು
ಇದರ ಖನಿ ಬಾನಹುದೊ ಬುವಿಯೊ ಕಾಣೆ ॥ ೬ ॥

(ಚಿತ್ತವಿಕಾರವನ್ನು ಕಂಡು)

ಇದೇನು ? ನಾನು ರಾಮನ ತಮ್ಮ ಲಕ್ಷ್ಮಣನಲ್ಲವೆ ?—

ಸೊಬಗೇರಿಪಳೊ ಬುವಿಗೆ ದಿವಕೆ ಮೋಹಿವಳೆಂಬ
ಚಂಚಲಾತ್ಮರ ತರ್ಕ ನಿಲ್ಲಲಿನ್ನು ;
ತಂದೆತಾಯ್ಗಳ ವಚನಪಾಲನೆಯ ಪಣತೊಟ್ಟು
ಕಾಡಿಂಗೆ ನಡೆತಂದ ನಿಷ್ಠನೆನಿಪ

ಪಿರಿಯಣ್ಣನಾಜ್ಞೆಗನುವರ್ತನೆಯು ವ್ರತವಾಂತು
ಮದನಪರವಶನಹುದು ನಾನದೆಂತು? ॥ ೭ ॥

(ಸುಂದರಿಯ ಸುಕುಮಾರ ವೇಷದಲ್ಲಿ ಶೂರ್ಪಣಖಿಯ ಪ್ರವೇಶ)

ಶೂರ್ಪಣಖಿ—(ಲಕ್ಷ್ಮಣನನ್ನು ನೋಡಿ) ಓ, ಇವನೂ ಅವನೇ! (ನಾಚುವಳು).

ಲಕ್ಷ್ಮಣ—ಇವಳ ವರ್ತನೆ (ನನ್ನ ವ್ರತಕ್ಕೆ) ಪ್ರತಿಕೂಲವಾಗಿದೆ. ಏಕೆಂದರೆ—

ನಾನು ತಾಪಸಜನರಿಗನುಗುಣವಪ್ಪ ವರ್ತನೆಯಿಂದಲೆ
ಇವಳ ಕಡೆಗಣಿಸುತ್ತೆ ಬಿರುಗಣ್ಣಿಂದೆ ನೋಡುತಲಿರ್ದರೂ;
ನಾಣ್ಚುತೀಕೆಯು ಕೆಳಗೆ ವದನವನಿಳಿಸುತಿರ್ಪಳು, ಚಲನದೆ
ಮುಡಿದ ಪೂಗಳಿನಳಿಯ ಬಳಗವು ಹಾರಿಹೋಗಲು ವಹಿಲದೆ ॥೮॥

ಶೂರ್ಪಣಖಿ—ಇನ್ನು ಇವನೇನು ಹೇಳುವನೋ! ಹೇಗಾದರೂ ಆಗಲಿ, ಇಷ್ಟನ್ನು ಹೇಳುವೆನು. ಆರ್ಯ, ಇತ್ತ ಬರಬೇಕು.

ಲಕ್ಷ್ಮಣ—ಹೆಂಗಸರೊಡನೆ ಹೇಗೆ ವರ್ತಿಸಬೇಕೆಂಬ ಲೋಕಾಚಾರವು ವ್ರತನಿಷ್ಠೆಗೆ ಗೊತ್ತಿರುವುದಿಲ್ಲ. (ಮೌನದಿಂದಿರುವನು)

ಶೂರ್ಪಣಖಿ— (ಸ್ವಲ್ಪ ಹಿಂಬಾಲಿಸಿ) ಆರ್ಯ, ಶರಣಾಗತೆಯಾದ ಹೆಂಗಸನ್ನು ಅಲಕ್ಷ್ಯಮಾಡುವುದು ಆರ್ಯನಿಗೆ ತರವಲ್ಲ.

ಲಕ್ಷ್ಮಣ—ಇಲ್ಲ, ಇಲ್ಲ. ಪೂಜ್ಯೆಯನ್ನು ಅಲಕ್ಷ್ಯಮಾಡುತ್ತಿರುವುದು ನಾನಲ್ಲ; ಕಷ್ಟದೆಸೆಗೆ ಸಿಕ್ಕಿ ಶೋಚನೀಯನಾಗಿರುವ ಹಿರಿಯನ ಅನುಲ್ಲಂಘನೀಯವಾದ ಅಪ್ಪಣೆ.

ಶೂರ್ಪಣಖಿ—ಹಾಗಾದರೆ ಈ ಹೆಂಗಸಿನ ವಿಷಯದಲ್ಲಿಯೂ ಹಿರಿಯನ ಅಪ್ಪಣೆಯೆಂಬುದು ಉಪೇಕ್ಷೆಗೆ ಅರ್ಹವಾಗಲಾರದಷ್ಟೆ?

ಲಕ್ಷ್ಮಣ—(ರೋಷದಿಂದ) ಯಾರು, ನನಗೆ ಅಪ್ಪಣೆ ಮಾಡುವವರು ಯಾರು?

ಶೂರ್ಪಣಖಿ—(ಅಂಜುತ್ತಾ) ಪ್ರಸನ್ನನಾಗಬೇಕು, ಆರ್ಯನು ಪ್ರಸನ್ನನಾಗಬೇಕು. ಆರ್ಯ ರಾಮನೇ ಅಪ್ಪಣೆ ಮಾಡಿದ್ದಾನೆ!

ಲಕ್ಷ್ಮಣ—(ಸ್ವಗತ) ಓಹೊ, ಇವಳು ಆರ್ಯನನ್ನಾಗಲೇ ಕಂಡುಬಂದಿದ್ದಾಳೆಂದಾಯಿತು. ಇರಲಿ, ಅಣ್ಣನೊಡನೆ ಕ್ಷಣಕಾಲವಾದರೂ ಮಾತನಾಡಿ ಮಾನ್ಯತೆ ಪಡೆದಿರುವ ಈಕೆಯನ್ನು ಸ್ವಲ್ಪ ಸಂತೈಸುವೆನು. (ಪ್ರಕಾಶ) ಭದ್ರೆ, ಆರ್ಯನು ಏನೆಂದು ಅಪ್ಪಣೆಮಾಡಿರುವನು?

ಶೂರ್ಪಣಖೆ—ಆರ್ಯನು ಲಾಲಿಸಬೇಕು.

ಲಕ್ಷ್ಮಣ—ಲಕ್ಷ್ಯಪೂರ್ವಕವಾಗಿ ಕೇಳುತ್ತಿದ್ದೇನೆ.

ಶೂರ್ಪಣಖೆ—ಆರ್ಯ, ನನ್ನೊಡನೆ ನೀನು ಆತನ ಸೇವೆಗೈಯಬೇಕೆಂಬುದೇ ಆರ್ಯ ರಾಮನ ಅಪ್ಪಣೆ.

ಲಕ್ಷ್ಮಣ—(ಕೈಯನ್ನು ಅಡ್ಡಮಾಡುತ್ತಾ) ನೋಡು—

ಉಡೆಯೋ ನಾರುಡೆ, ವೃಕ್ಷಮಲ್ತೆ ಸದನಂ, ವನ್ಯಾಶ್ರಿತಂ ಭೋಜನಂ
ಜಡೆಯಿಂ ನೀರೊಸರಲ್ಕೆ ಭೂಷಣಮೆನಲ್ ದರ್ಭಾಳಿಯೋ ಸೆಜ್ಜೆಯುಂ ।
ಪಲವಿಂದೇಂ, ವನದಲ್ಲಿ ಕಾಡಮಿಗದೊಲ್ ಬಾಳ್ವರ್ಗೆ ನೀಂ ತಕ್ಕಳೇ?
ತರುಣೀ, ತಾಪಸರೆಲ್ಲಿಯೆಲ್ಲಿ ಮದನಂ ಶತ್ರೂಪಮಂ ನಿಷ್ಠೆಯಾ? ॥೯॥

ಶೂರ್ಪಣಖೆ—ಸುಳ್ಳು. ಇದು ಸುಳ್ಳು. ಆ ಆರ್ಯನು ಆರ್ಯೆಯೊಂದಿಗೆ ಇರುತ್ತಿಲ್ಲವೆ?

ಲಕ್ಷ್ಮಣ—ಭದ್ರೆ, ಆರ್ಯನ ವರ್ತನೆಯ ರಹಸ್ಯವನ್ನು ನೀನರಿಯೆ.

ಶೂರ್ಪಣಖೆ—ಅದೇನದು?

ಲಕ್ಷ್ಮಣ—ತನ್ನ ಪ್ರತಿಜ್ಞೆ ಮುಗಿದು, ಪ್ರಜೆಗಳನ್ನೂ, ಗುರುಜನರನ್ನೂ, ಭರತನನ್ನೂ ನೋಡುವವರೆಗೆ ಆರ್ಯನಿಗೆ ಧರ್ಮವೆಂಬ ಪುರುಷಾರ್ಥವೊಂದೇ ಆಲಂಬನ.

ಶೂರ್ಪಣಖೆ—ಹಾಗಾದರೆ ಇಲ್ಲಿ ಅವಳು ಮಾಡುತ್ತಿರುವುದೇನು?

ಲಕ್ಷ್ಮಣ—ನಾನೇನು ಮಾಡುತ್ತಿರುವೆನೋ ಅದೇ.

ಶೂರ್ಪಣಖೆ—ಹೇಗೆ ಆಕೆಯು ಆರ್ಯನನ್ನು ಉಪಚರಿಸುತ್ತಿರುವಳೋ ಹಾಗೆಯೇ ನಾನೂ ನಿನ್ನನ್ನು ಉಪಚರಿಸುವೆನು.

ಲಕ್ಷ್ಮಣ—ಭದ್ರೆ, ಇದನ್ನು ಯಾರಾದರೂ ಬಯಸಿ ಪಡೆಯುವುದುಂಟೆ? ನೋಡು—

ಆವುದರ ಬಿಡುಗಡೆಗೆ ಬುದ್ಧಿಯುಳ್ಳವರೆಲ್ಲ
ಎಡೆಬಿಡದೆ ಹೆಣಗುತ್ತೆ ಯತ್ನಿಸುವರೋ;
ಆ ದಾಸ್ಯವನೆ ನೀನು ನೀನಾಗಿ ಬಯಸುತಿರೆ
ಮುಗ್ಧಲೋಚನೆ! ದಿಟದೆ ಮುಗ್ಧೆಯೆನುವೆ ॥೧೦॥

ಶೂರ್ಪಣಖೆ—ಪ್ರೇಮಕ್ಕೆ ಗುಣದೋಷಗಳ ಅಳತೆ ಶಕ್ಯವೇನು?

ಲಕ್ಷ್ಮಣ—(ಸ್ವಗತ) ಹೀಗೆ ನುಡಿಯುವ ಇವಳನ್ನು ಹೇಗೆ ನಿರಾಕರಿಸಲಿ? (ಚಿಂತಿಸಿ) ಹೋ, ಉಪಾಯ ಹೊಳೆಯಿತು! (ಪ್ರಕಾಶ) ಭದ್ರೆ, ಆರ್ಯನು ಪರ್ಣಶಾಲೆಯನ್ನು ಪ್ರವೇಶಮಾಡಿದ ಮೇಲೆ ನೀನು ಹೇಳುವ ಸ್ಥಳದಲ್ಲಿ ನಿನ್ನನ್ನು ನೋಡುವೆನು.

ಶೂರ್ಪಣಖೆ—ಆರ್ಯ, ಹಾಗಾದರೆ ಆ ಪರ್ಣಶಾಲೆಯ ಪಕ್ಕದಲ್ಲೇ ನಾನು ಕಾಯುತ್ತಿರುವೆನು.

ಲಕ್ಷ್ಮಣ—(ಸ್ವಗತ) ಆಗಲಂತೆ. ಕಾಲಹರಣವೆಂದಮೇಲೆ ವಿಘ್ನವಿಲ್ಲದೆ ಹೋಗುವುದೆ? (ಪ್ರಕಾಶ) ನಿನ್ನ ಉದ್ದೇಶದಂತೆಯೇ ಆಗಲಿ.

ಶೂರ್ಪಣಖೆ—ಆರ್ಯನ ಅಪ್ಪಣೆ.

(ನಿಷ್ಕ್ರಮ)

ಲಕ್ಷ್ಮಣ—(ವಿಚಾರಮಾಡುತ್ತಾ) ಇವಳನ್ನು ಪರೀಕ್ಷೆಮಾಡಿ ನೋಡಬೇಕು. ಏಕೆಂದರೆ—

ವನಚರರೆ ಬರಲರಿಯದೀ ವಿಪಿನವೆತ್ತಣದು
ಕೈರವಚ್ಛವಿನೇತ್ರೆ ಬಾಲೆಯೆತ್ತ;
ಹೇಮಪದ್ಮದ ರಸವ ಸವಿವ ಕಲಹಂಸಿಯನು
ಕಡಲೊಳಗೆ ಕಾಣಲ್ಕೆ ನಂಬಲಹುದೆ? ॥ ೧೧ ॥

ಓ, ನಾನು ಯಾವ ಸ್ಥಳವನ್ನು ಕುರಿತು ಹೊರಟೆನೋ ಅದೇ ಇದು!

(ಸೀತೆಯೊಡನೆ ರಾಮನ ಪ್ರವೇಶ)

ರಾಮ—ದೇವಿ, ನಗರವಾಸಕ್ಕಿಂತ ವನವಾಸವೇ ಸುಖಕರವಾಗಿದೆಯೆಂದು ನನಗೆ ತೋರುತ್ತದೆ. ನೋಡು—

ಉದ್ಯಾನಂ ವನಭೂಮಿ ಗಂಧಭರಿತಂ ಪೂತಿರ್ಪ ವೃಕ್ಷಂಗಳಿಂ
ಮೇಘಶ್ಯಾಮನಗಂ ನಗಲ್ಕೆ ತೊರೆಯಿಂ ಕ್ರೀಡಾದ್ರಿಯಂತೊಪ್ಪುಗುಂ
ಮೀಯಲ್ ಸಾರಸಸಂಕುಲೋರ್ಮಿಯಿಹುದೀ ಸಿಂಧೂತ್ಕರಂ ಗ್ರೀಷ್ಮದೊಳ್
ಮಿತ್ರಂ ಶೀಕರಸಂಗ ಶೀತಮಿದೆ ತಾಂ ಹೃದ್ಯಂ ಸರೋಜಾನಿಲಂ

ಸೀತೆ—ಆರ್ಯಪುತ್ರ, ನಾನು ಬದುಕಿರುವವರೆಗೂ ಇಲ್ಲಿಯೇ ವಾಸ ಮಾಡುತ್ತಿರಬೇಕೆನಿಸುತ್ತದೆ, ಅಯೋಧ್ಯೆಯಲ್ಲಿ ಗುರುಜನರು ಅಗಲಿಕೆಯಿಂದ ಪರಿತಪಿಸದೆ ಇರುವುದಾದರೆ.

ಲಕ್ಷ್ಮಣ—(ನೋಡಿ) ಇದೋ ಆರ್ಯನಿಲ್ಲಿಯೇ ಇರುವನು. ಅಯ್ಯೋ, ಎಷ್ಟು ದುಃಖಕರವಾಗಿದೆ ವಿಧಿಯ ಕಾರ್ಯ; ಅಲ್ಲ ಅಲ್ಲ, ಕೈಕೆಯ ಕಾರ್ಯ! ಅಮ್ಮಾ, ಕೈಕೆ—

ರಾಜವೇಷವನುಳಿದು ಕೆಂಪು ನಾರುಡೆಯನ್ನು
ಉಟ್ಟನಲ್ಲವೆ ಆರ್ಯ ರಾಮನಿಂತು;
ಆರ್ಯ ಸೀತೆಯು ಕೂಡ ಹೆಜ್ಜೆಯಿಡುವಂತಾಯ್ತು
ಹೆಣ್ಣುತೋಳದ ಹೆಜ್ಜೆಯಿರುವ ನೆಲದೆ;
ಸಂತಾಪದಿಂ ಭರತನಂತು ಬಸವಳಿಯುತಿರೆ,
ಕೋಸಲದ ಜನರೆಲ್ಲ ಗೋಳಿಡುತಿರೆ;
ಹಾಳು ವೈಧವ್ಯವದು ನಿನ್ನನೂ ಸೋಂಕಿಹುದು
ಚಿಃ ನಿನ್ನ ಪಾಳ್ಗಯ್ಮೆಗೆಲ್ಲ ವಿಧದೆ. ||೧೩||

ಇನ್ನು ಅಣ್ಣನ ಬಳಿಸೇರುವೆನು. (ಸಮೀಪಿಸಿ) ಆರ್ಯನಿಗೆ ಜಯವಾಗಲಿ!

ರಾಮ—ಲಕ್ಷ್ಮಣ, ನಿನ್ನ ಕೆಲಸ ಮುಗಿಯಿತೆ?

ಲಕ್ಷ್ಮಣ—ಹೌದು, ಮುಗಿಯಿತು.

ರಾಮ—ಹಾಗಾದರೆ ಅಲ್ಲಿಗೆ ದಾರಿ ತೋರಿಸು.

ಲಕ್ಷ್ಮಣ—ಆರ್ಯನ ಅಪ್ಪಣೆ. ಇತ್ತ ಬರಬೇಕು, ಇತ್ತ.

(ನಡೆದು ಬರುವರು)

ರಾಮ—(ಲಕ್ಷ್ಮಣನ ಮುಖದ ಕೆಂಪನ್ನು ಕಂಡು) ವತ್ಸ, ಲಕ್ಷ್ಮಣ,

ಮೋಕ್ಷಮಾರ್ಗದೊಳಿರುವ ಮುನಿಜನರ ವಂದಿಸುತ
ನಾವು ಪಯಣಿಸುತಿರುವ ದಾರಿಯಲ್ಲಿ;
ಸ್ವೇಚ್ಛೆಯಿಂ ಸೇವಿಸುತ ತೀರ್ಥನದಿಗಳ ನೀರ,
ಚಿಂತೆಯೆಲ್ಲವನಂತೆ ದೂರಕಟ್ಟಿ;
ಲಕ್ಷ್ಮಣನೆ, ಭೂಭಾರವನ್ನಿಳಿಸಿ ತಾವಾಗಿ
ಇಕ್ಷ್ವಾಕುನೃಪರೆಲ್ಲ ನಡೆದು ಬರುವ
ಮುನಿವನಕೆ ಬಂದಿಹೆವು, ಬೇರೊಂದು ನೆವದಿಂದೆ
ಕೈಕೆಯೆಮಗೊಳ್ಳಿತನೆ ಗೈದಳಿಂತು ||೧೪||

ಲಕ್ಷ್ಮಣ—ಗುಣವಂತರಿಗೆ ಅಗುಣಗಳೇ ಕಾಣುವುದಿಲ್ಲವೆಂಬ ಗಾದೆ ನಿಜ.
ರಾಮ—ಲಕ್ಷ್ಮಣ, ತಾಯಮೇಲಿನ ನಿನ್ನ ಕೋಪವಿನ್ನೂ ಇಳಿಯಲಿಲ್ಲವೆ?
ಲಕ್ಷ್ಮಣ—ಆರ್ಯ,

ಪಾಲೊಸರೆ ತಾಯ್ಮೊಲೆಗಳೆರಳಿರಲು ಕಣ್ಣುಗಳು
ನಿನ್ನೊಳಾನಂದವನು ಸೂಸುತಂದು;
ತಂದೆ ಕಂಬನಿಗಳನು ಮಿಡಿಯುತಿರಲದರೊಡನೆ
ಹೇಮಕುಂಭಗಳಿಂದ ನಿನ್ನ ತಲೆಗೆ
ಬೀಳ್ವ ನೀರನು ತಡೆದು ತನ್ನ ಮಂತ್ರಣದಿಂದೆ
ಆ ವಸಿಷ್ಠನ ಮಂತ್ರವನ್ನೆ ಗೆಲ್ದ
ಮೂಲೋಕದುತ್ಸವಕೆ ಕಾಳರಾತ್ರಿಯನೆಂತು
ತಾಯೆಂದು ತಿಳಿಯುವೆನು ನಿರ್ದಯಳನು? ॥೧೫॥

ರಾಮ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ. ಶಾಂತಂ ಪಾಪಂ.
ಕುತ್ಸಿತವಾಗಿಹ ರಾಜ್ಯಕ್ಕಾಶಿಸಿ
ನಿನ್ನಯ ತಾಯನೆ ನಿಂದಿಸುವೆ;
ತುಷ್ಟಿಯನರಿಯದ ಜನಗಳ ಬುದ್ಧಿಯು
ಅಧರ್ಮನಿರತವು ಸಹಜವೆನೆ ॥೧೬॥

ಮಗು, ನೋಡು, ಪಾಪಾತ್ಮನಾದ ಕ್ಷತ್ರಿಯನ ಅವಸ್ಥೆಯೆಂದರೆ—
ರಾಜನೀತಿವಿದರಿಗೆಲ್ಲಮೊರ್ವಳಿಳೆಯೆ ಪತ್ನಿಯು,
ಅಸ್ತ್ರನಿಕರ ಮಿತ್ರರೆನಿಸೆ, ಪುತ್ರಸಹಜರರಿಗಳು;
ಪರರ ಪಾಪದಿಂದ ನರಕಪತನವೆನಲು, ಲಾಭವು—
ಬಿಳಿಯ ಕೊಡೆಯದೊಂದು ಮತ್ತೆ ಬೀಸುವೆರಡು ಚಾಮರ ॥೧೭॥

ಲಕ್ಷ್ಮಣ—ನಾನು ರಾಜ್ಯದ ಆಸೆಯಿಂದ ಹೇಳುತ್ತಿಲ್ಲ.
ರಾಮ—ನಿನ್ನ ಕೋಪಕ್ಕೆ ಬೇರೆ ಕಾರಣವಾವುದು?
ಲಕ್ಷ್ಮಣ—ಕ್ರಮವು ವಿಪರ್ಯಾಸವಾಯಿತೆಂಬುದು.
ರಾಮ—ಹಾಗಾದರೆ ನಿನ್ನ ನಿಂದೆಗೆ ನಾನೇ ಮೊದಲ ಗುರಿಯಾಗಬೇಕೆಂದಾಯಿತು. ನೋಡು—

ದೇವೇಂದ್ರಸಮನಪ್ಪ ತಂದೆ ನೃಪನಾಗಿರಲು
ಕಣ್ಗಳಿಂ ಪ್ರೇಮಾಶ್ರುವುದುರುತಿರಲು ;
ಲಜ್ಜೆಯಿಲ್ಲದೆ ನಾನು ಪಟ್ಟಾಭಿಷೇಕವನು
ಬಯಸಿ ಸಿಂಹಾಸನದೆ ಕುಳಿತೆನಕಟಾ ॥೧೮॥

ಸೀತೆ—ಆರ್ಯಪುತ್ರನು ಸತ್ಯವಾದುದನ್ನೇ ನುಡಿಯುತ್ತಿರುವನು.

ಲಕ್ಷ್ಮಣ—'ನನಗೆ ವಯಸ್ಸು ಹೆಚ್ಚಾಯಿತು' ಎಂಬ ಕಾರಣದಿಂದ ತಂದೆ ನಿನ್ನಲ್ಲಿ ಆ ರೀತಿ (ರಾಜ್ಯವನ್ನು) ವಹಿಸಹೊರಟನಷ್ಟೆ !

ರಾಮ—ಹಾಗಾದರೆ, ಭರತನು ನನಗಿಂತ ಕಿರಿಯನಷ್ಟೆ !

ಲಕ್ಷ್ಮಣ—'ನನಗೆ ಭೂಮಿಯನ್ನು ರಕ್ಷಿಸುವ ಶಕ್ತಿಯಿಲ್ಲ'ವೆಂದು ತಂದೆಯ ಅಭಿಪ್ರಾಯ.

ರಾಮ—ಮಗು, ನೋಡು—

ದಾನವರೆಲ್ಲರನಿಕ್ಕುತ್ತಾವನ
ತೇಜವೆ ಪೊರೆವುದೊ ನಾಕವನು ;
ತಾನೇ ದೇವತೆಯೆನಿಪೀ ಬುವಿಯನು
ಪೊರೆಯಲಶಕ್ತನೆ ದಶರಥನು ? ॥೧೯॥

ಲಕ್ಷ್ಮಣ—ಆದರೆ, ಮಗನ ಮೇಲಿನ ವ್ಯಾಮೋಹದಿಂದ ಅವಳು ದುರಾಸೆ ಮಾಡಿದಳೆಂಬುದು ನಿಜವಷ್ಟೆ !

ರಾಮ—ಲೋಕಸ್ವಭಾವವೇ ಹೀಗೆ. ಬಹುಪುತ್ರರಾದವರಿಗೆ ಒಬ್ಬ ಮಗನನ್ನು ಕಂಡರೆ ಸ್ವಲ್ಪ ಮೋಹ ಹೆಚ್ಚಾಗಿರುತ್ತದೆ. ಈಗ ನಿನಗೇ ಆಗಲಿ, ಎಲ್ಲ ಸೋದರರಲ್ಲಿಯೂ ಪ್ರೇಮ ಒಂದೇ ಸಮವಾಗಿದೆಯೇನು ?

ಲಕ್ಷ್ಮಣ—ಹೆಚ್ಚು ಮಾತಿಂದೇನು ? ತಂದೆಯ ಮರಣಕ್ಕೆ ಎಲ್ಲ ರೀತಿಯಿಂದಲೂ ಅವಳೇ ಕಾರಣಳಾದಳು.

ರಾಮ—ಅಲ್ಲ, ಅಲ್ಲ. ತಂದೆಯ ಬಗೆಗೆ ಮಾತೆಯು ನಿರಪರಾಧಿನಿ. ನೋಡು—

ಕಣ್ಣಿಲ್ಲದ ತಾಯ್ತಂದೆಗೆ ಮಡಿನೀರನು ತರಲು
ಕೊಳನೊಳು ಮಗ ತಂಬಿಗೆಯಿಡೆ ಗುಳುಗುಳುರವ ಬರಲು ;
ಉಷೆಯಲ್ಲಿಯೆ ಮಿಗವೇಂಟೆಗೆ ನಡೆತಂದ ನೃಪಾಲಂ
ಕಾಡಾನೆಯ ದನಿಯೆನ್ನುತೆ ಬಹುರಭಸದಿನೆಸೆದಾ
ಕೂರಂಬದೆ ಕೊಂಡಿತ್ತಹ ಭೂಪಾಲಕನಸುವಂ ॥೨೦॥

ಸೀತೆ—ಹೌದು. ವಿಧಿಯವಿಲಾಸ ಹಾಗೆಯೇ ಆಗಿರಬೇಕು. ಇಲ್ಲದಿದ್ದರೆ ಯಾರು ತಾನೆ ತನ್ನನ್ನೂ ಲೋಕವನ್ನೂ ವಿನಾಶಕ್ಕೀಡುಮಾಡಿಯಾಳು?

ಲಕ್ಷ್ಮಣ—ಹಾಗಾದ ಪಕ್ಷಕ್ಕೆ ನನ್ನದೇ ತಪ್ಪಾಯಿತು. ಆರ್ಯನು ಮನ್ನಿಸಬೇಕು. ಮಾತನಾಡಿಕೊಂಡು ಬರುತ್ತಾ ದೂರದ ಪರಿವೆಯೇ ಆಗದೆ ಪರ್ಣಶಾಲೆಯನ್ನು ಬಂದು ಮುಟ್ಟಿದ್ದೇವೆ. ಆರ್ಯನು ಪ್ರವೇಶ ಮಾಡಬೇಕು.

ರಾಮ—ಲಕ್ಷ್ಮಣ, ನೀನೂ ಏಕಾಂತದಲ್ಲಿ ಹೋಗಿ ಆಯಾಸವನ್ನು ಪರಿಹರಿಸಿಕೊ.

ಲಕ್ಷ್ಮಣ—ಆರ್ಯನ ಅಪ್ಪಣೆ. (ನಿಷ್ಕ್ರಮ)

ರಾಮ—(ಪರ್ಣಶಾಲೆಯನ್ನು ಪ್ರವೇಶಿಸಿ, ಸುತ್ತಲೂ ನೋಡಿ, ವಿಸ್ಮಯದಿಂದ) ದೇವಿ, ವತ್ಸ ಲಕ್ಷ್ಮಣನ ಸರ್ವತೋಮುಖವಾದ ನೈಪುಣ್ಯವನ್ನು ನೋಡು. ಇಲ್ಲಿ—

ಹೆದೆಯ ಟಂಕೃತಿಯಿಂದೆ ಮಿಗಗಳ ದೂರಕಟ್ಟಿಹನೈಸಲೆ
ಪರ್ಣಶಾಲೆಯ ರಚಿಸಿ ಪೊಸಪೂವಿಂದೆ ಶಯನವನೀಕಡೆ;
ಬೆತ್ತದೆಳೆಯಿಂ ಹೆಣೆದು ಮಾಡಿದ ಸೊಬಗಿನಾಸನವಿಂತಿದೌ
ನದಿಯ ನೀರಿಂ ತಳಿದು ನೆಲವನು ಪೂವನೆರಚಿಹನೆಲ್ಲೆಡೆ || ೨೧ ||

ಸೀತೆ—ಆರ್ಯಪುತ್ರ, ಹೂವು ತಳಿರುಗಳಿಂದ ತುಂಬಿರುವ ಪರ್ಣಶಾಲೆಯ ಐಸಿರಿಯು ಅರಮನೆಯ ಸಮೃದ್ಧಿಯನ್ನು ಕೀಳಾಗಿಸುತ್ತಿದೆ.

ರಾಮ—ದೇವಿ, ಈ ಪ್ರದೇಶವು ಏಕಾಂತವಾಗಿದೆ. ವನಭೂಮಿಯ ತಂಗಾಳಿಯನ್ನು ಸೇವಿಸು. ಈಗ—

ಶುಕವಾಣಿ, ಧೂಳಿಡಿದ ಶುಕಹರಿತ ಕಂಚುಕವ
ನೋಸರಿಸು ನಿರ್ಭೀತಿಯಿಂದ ನೀನು;
ನಿನ್ನಧರಕಮಲವಿದನೊಣಗಿಸಿರೆ ನಿಟ್ಟುಸಿರು
ಬಾಯಗಂಧವನಾಂತು ಸುಳಿಯುತಿಂತು || ೨೨ ||

ಸೀತೆ—ಆರ್ಯಪುತ್ರನ ಅಪ್ಪಣೆ.

(ನಿಷ್ಕ್ರಮ - ಇಬ್ಬರೂ)

**ಇಲ್ಲಿಗೆ ಮೊದಲನೆಯ ಅಂಕ ಮುಗಿದುದು.**

# ಎರಡನೆಯ ಅಂಕ

(ಸುಂದರ ಸುಕುಮಾರ ವೇಷದಲ್ಲಿ ಶೂರ್ಪಣಖಿಯ ಪ್ರವೇಶ)

ಶೂರ್ಪಣಖಿ—(ನಿರ್ವಿಣ್ಣಳಾಗಿ) ಮತ್ತೊಮ್ಮೆ ರಾಮನನ್ನೇ ಪತಿಯಾಗೆಂದು ಒಲಿಸಿ ನೋಡುವೆನು. ಅವನ ಮಾತನ್ನು ನಂಬಿಕೊಂಡು ನಾನು ಲಕ್ಷ್ಮಣನ ಬಳಿಗೆ ಬಂದುದು ಮೂಢಶಿರೋಮಣಿಯ ಬಳಿಗೆ ಸರಸ್ವತಿ ಬಂದಂತೆಯೇ ಆಯಿತು. ಉದ್ದೇಶ ಸಫಲವಾಗದೆಯೇ ಹಿಂದಿರುಗುತ್ತಿದ್ದೇನೆ. ಇಷ್ಟು ಹೊತ್ತೂ ವ್ಯರ್ಥವಾಗಿ ಪರ್ಣಶಾಲೆಯ ಸಮೀಪದಲ್ಲಿ ಆ ಅಕರುಣ, ಅಪುರುಷ, ಅಧಾರ್ಮಿಕ, ಅಯೋಗ್ಯ, ಮನುಷ್ಯಜಂತುವನ್ನು ಕಾಯುತ್ತಿದ್ದುದಾಯಿತು. ಅದೃಷ್ಟಹೀನೆಯಾದ ನನಗೆ ಒಂದು ಶೂಲವೇ ದೊರೆತಂತಾಯಿತು. ಅಥವಾ ನನ್ನನ್ನು ನಿರಾಕರಿಸಬೇಕಾದರೆ ಅವನ ಭಾಗ್ಯವೇ ಅಷ್ಟೆನ್ನಬೇಕು. ಇರಲಿ; ಇವನ ಅಣ್ಣನಿಗೆ ಎಲ್ಲವನ್ನೂ ತಿಳಿಸಿ ಅನಂತರ ಮುಂದಿನದನ್ನು ನೋಡುವೆನು.

(ನಡೆಯುವಳು)

(ಸೀತೆಯೊಡನೆ ರಾಮನ ಪ್ರವೇಶ)

ರಾಮ—ವೈದೇಹಿ, ದೂರಕ್ಕೆ ಎಲ್ಲವೂ ಅದ್ಭುತವೆಂದೇ ಕೇಳಿಬರುತ್ತದೆ. ನೋಡು—

ಗಿರಿತುಂಗ ಮೇಘನಿಭ ರಕ್ಕಸರಿನೆತ್ತಲುಂ
ತುಂಬಿಹುದು ಪಂಚವಟಿಯೆಂದು ಕೇಳಿ
ಉಕ್ಕಿ ಹರಿಯುತಲಿತ್ತು ಕೌತುಕವು ಮನದೊಳಗೆ ;
ಈಗದನೆ ನೋಡುವೊಡೆ ಪತ್ತೆಸಾರ್ದು—
ಪೂರ್ವಪರಿಚಿತಮಪ್ಪ ಬನದ ಸಿರಿಯೆಸೆಯುವುದು ;
(ಸೋಜಿಗದ ವಸ್ತುಗಳು ಕಾಣಲರಿದು.)
ಬೆಟ್ಟ, ಸಾಗರ, ಕಡಲು—ಎಲ್ಲವೂ ಅದ್ಭುತವು
ಕೇಳ್ವರ್ಗೆ ಕಥೆಗಳನು ದೂರದಿಂದ ॥ ೧ ॥

ಸೀತೆ—ಆರ್ಯಪುತ್ರ, ವನವಾಸದಲ್ಲಿ ಕಂಡ ಆಶ್ಚರ್ಯಗಳನ್ನು ಅಂತಃಪುರ

ದಲ್ಲೇ ಎಂದೆಂದೂ ಇರುವ ಜನರಿಗೆಲ್ಲ ಎಂದಾದರೂ ಹೇಳಿ ಚಕಿತ ಗೊಳಿಸಬೇಕೆಂಬ ಕುತೂಹಲ ನನಗೂ ಇದೆ.

ಶೂರ್ಪಣಖೆ—(ಸಮೀಪಿಸಿ) ಆರ್ಯನಿಗೆ ಜಯವಾಗಲಿ.

ರಾಮ—ಸುಂದರಿ, ಲಕ್ಷ್ಮಣನನ್ನು ಕಂಡಿದ್ದೆಯೇನು?

ಶೂರ್ಪಣಖೆ—ಹೌದು, ಕಂಡಾಯಿತು.

ರಾಮ—ನನ್ನ ಮಾತನ್ನು ಅವನು ಕೇಳಿದನಷ್ಟೆ!

ಶೂರ್ಪಣಖೆ—ಕೇಳುವುದಕ್ಕೇನೋ ಕೇಳಿದನು.

ರಾಮ—ಹಾಗಾದರೆ ನಿನ್ನನ್ನು ಅವನು ಬಿಟ್ಟುದೇಕೆ?

ಶೂರ್ಪಣಖೆ—'ತಪಸ್ವಿಗಳ ಧರ್ಮವನ್ನು ಪಾಲಿಸುತ್ತಾ ನಾನು ಆರ್ಯನನ್ನು ಸೇವೆ ಮಾಡುತ್ತಿರುವಾಗ ಸಮಾಧಿಭಂಗಕ್ಕೆ ಕಾರಣವಾಗುವ ನೀನೇಕೆ?' ಎನ್ನುವುದೇ ಕಾರಣ.

ರಾಮ—(ಮುಗುಳ್ನಗೆ ನಗುತ್ತಾ ಸ್ವಗತ) ಅವನು ಹೀಗೆಯೇ ಹೇಳಿರಬೇಕು. (ಪ್ರಕಾಶ) ಭದ್ರೆ, ಮತ್ತೆಯೂ ನಿನ್ನನ್ನು ಆಯಾಸದ ದಾರಿಯತ್ತಲೇ ತಿರುಗಿಸುವೆನು.

ಶೂರ್ಪಣಖೆ—ಆರ್ಯನು ಹಾಗೆನ್ನಲಾಗದು. ಇಲ್ಲಿಯೇ ಇದ್ದುಕೊಂಡು ನಾನು ಆರ್ಯನ ಪಾದಗಳನ್ನು ಸೇವೆ ಮಾಡುವೆನು.

ಸೀತೆ—ಅಯ್ಯೋ ಪಾಪ! ಇವಳು ಆರ್ಯಪುತ್ರನ ವಿಷಯದಲ್ಲಿ ತೋರಿಸುವ ಪ್ರೇಮವು ಇವಳ ಗುಣಗ್ರಹಣೆಯನ್ನೇ ಸೂಚಿಸುತ್ತದೆ.

ರಾಮ—(ಶೂರ್ಪಣಖೆಯನ್ನು ನೋಡಿ) ಭದ್ರೆ, ನಿನ್ನ ಇಷ್ಟಾರ್ಥವು ನನಗೂ ಇಷ್ಟವೇ. ಆದರೆ—

ಗುರುವಿನಪ್ಪಣೆಯಂತೆ ಸಮಿಧೆಗಳಿಂದ ಹೊತ್ತಿರ್ದಗ್ನಿಯೆ
ಸಾಕ್ಷಿಯೆನಿಸಿರಲಂದು ಧಾತ್ರನ ಸುತನೆ ಮುನಿವರನೀಯಲು;
ಆರ ಪಾಣಿಯ ಪಿಡಿದೆನೋ ನಾಂ ಧರ್ಮಪಾಲನೆಗೆನ್ನುತೆ—
ಅವಳೆ ಈಕೆಯು ವಿಘ್ನವೆನಿಸಿರೆ ಮೋಕ್ಷಕಾಂಕ್ಷೆಯಿನಿರ್ಪಗೆ,
ಎಲ್ಲ ಪರಿಕರವದಕೆ,—ಮುಂದಕೆ ನೀನೆ ಚಿಂತಿಪುದುಚಿತವ ॥೨॥

ಶೂರ್ಪಣಖೆ—ಹಾಗಾದಮೇಲೆ ನಾನು ಮತ್ತೆಲ್ಲಿಯೂ ಹೋಗಲಾರೆ. ಇಲ್ಲಿಯೇ ಇದ್ದುಕೊಂಡು ಪ್ರಾಣಬಿಡುವೆನು.

ಸೀತೆ—ಆರ್ಯಪುತ್ರ. ಇವಳ ಈ ಕೆಲಸವು ಉಪೇಕ್ಷೆಗೆ ಅರ್ಹವಲ್ಲ.

ರಾಮ—ಭದ್ರೆ, ತಿರುಗಿಯೂ ನೀನು ಲಕ್ಷ್ಮಣನ ಬಳಿಗೇ ಹೋಗಬೇಕೆಂದು ನಿನ್ನನ್ನು ಕೇಳಿಕೊಳ್ಳುವೆನು.

ಶೂರ್ಪಣಖೆ—ಶಾಂತಂ ಪಾಪಂ, ಶಾಂತಂ ಪಾಪಂ! ಆರ್ಯನ ಮಾತನ್ನು ಕೇಳಿ ನಾನು ಈಗಾಗಲೇ ಸ್ತ್ರೀಸಹಜವಾದ ಆಚಾರವನ್ನು ಕೂಡ ಬಿಟ್ಟುದಾಯಿತು.

ರಾಮ—ಭದ್ರೆ, ಹಾಗೆನ್ನಬೇಡ, ಸನಾತನವಾದ ಧರ್ಮವಿರುವುದೇ ಹೀಗೆ—

ತರವಲ್ಲಂ ಕಾಂತೆಯರಿಂದಭಿ
ಸರಣಂ ವರನೆಡೆಗೆಯೆಂಬ ಬಗೆಯಂ ಬಿಡು ನೀಂ।
ಹರಶಿರಮಾಲಾನದಿಯುಂ
ಪರನದಿಗಳನೆಲ್ಲ ಕಾಂತನೊಳ್ ಕೂಡಿಸಳೇ? ॥೩॥

ಶೂರ್ಪಣಖೆ—ಆರ್ಯನಡಿಗಳ ಕಿಂಕರಳಾದ ನಾನು ಏನನ್ನೂ ಮಾಡಿಯೇನು. (ಸ್ವಗತ) ಆಗಲಿ, ಆತನು ಈಗಲೂ ನನ್ನ ವಿಷಯದಲ್ಲಿ ನಿರಾಕರಣೆಯನ್ನೇ ತೋರಿಸಿದ ಪಕ್ಷದಲ್ಲಿ, ನನ್ನ ನಿಜಸ್ವರೂಪವನ್ನೇ ಆಗ ಕೈಗೊಳ್ಳುವೆನು.

ಸೀತೆ—ಆರ್ಯಪುತ್ರ, ಆ ಅರಿಯದ ಬಾಲೆಯನ್ನು ಆರ್ಯಪುತ್ರನು ತಿರಸ್ಕರಿಸಿದಾಗ ನನಗೇ ಮನಸ್ಸಿನಲ್ಲಿ ಆತಂಕವಾಯಿತು.

ರಾಮ—ಕಟ್ಟುನಿಟ್ಟಿಲ್ಲದ ಸ್ತ್ರೀಯರು ಗೃಹಸ್ಥರ ಸಂಪರ್ಕಕ್ಕೆ ಅರ್ಹರಲ್ಲ.

ಸೀತೆ—ಆಕೆಯು ನಂಬಿಕೆಗೆ ಯೋಗ್ಯಳಲ್ಲವಾದರೆ ಕುಮಾರನ ಬಳಿಗೇಕೆ ಅವಳನ್ನು ಕಳಿಸಬೇಕು?

ರಾಮ—ದೇವಿ, ಕುಮಾರನು ಅವಳೊಡನೆ ಕೂಡುವುದೆಲ್ಲಿ ಬಂತು! ಅವಳನ್ನು ನಿರಾಕರಿಸಲು ಅದೊಂದು ನೆವ, ಅಷ್ಟೆ!

ಸೀತೆ—ಅಯ್ಯೋ ಪಾಪ! ಕುಮಾರನೂ ನಿರಾಕರಿಸಿದರೆ ಅವಳ ಗತಿಯೇನು?

ರಾಮ—(ಸೀತೆಯನ್ನು ನೋಡಿ) ದೇವಿ, ಅದೆಲ್ಲವೂ ಹಾಗಿರಲಿ—

ಚರಣನಳಿನದಿಂದೆ ನಡೆವುದೊಂದೆ ಯಾನಸಾಧನ,
ಶಯನಮುವನಿತಲವೆ, ಮೀಹವೊಂದೆ ನಿನಗೆ ಭೂಷಣ;

ಇಂತಿರಲ್ಕೆಯೂ ವಿಲಾಸದಿಂದೆ ನನ್ನ ಕಣ್ಣನು
ಸೆಳೆವೆ, ತರುಣಿ, ಪುರದೊಳಿರ್ದ ತೆರದಿನೇಂ ವಿಚಿತ್ರವು! ||೪||

ಸೀತೆ—(ಸ್ವಗತ) ಆರ್ಯಪುತ್ರನಿಗೆ ಅದು ಗೊತ್ತಿಲ್ಲವೇನೋ? ಮಹರ್ಷಿ ಪತ್ನಿಯಾದ ಅನಸೂಯೆ ನನ್ನನ್ನು ಆಶ್ರಮದಿಂದ ಬೀಳ್ಕೊಡುವಾಗ, 'ನಿನ್ನ ಗಂಡನ ಕಣ್ಣಿಗೆ ನಿನ್ನದೆಲ್ಲವೂ ಅಲಂಕಾರವಾಗಿಯೇ ಕಾಣಲಿ' ಎಂದು ವರವನ್ನು ಕೊಟ್ಟಿರುವಳು.

(ನೇಪಥ್ಯದಲ್ಲಿ)

....ನಿಲ್ಲು, ನಿಲ್ಲು! ರಾಕ್ಷಸಿಯೇ, ನಿಲ್ಲು!

ರಾಮ—(ಆಲಿಸಿ) ಇದೇನು, ಲಕ್ಷ್ಮಣನ ದನಿಯಂತಿದೆ!

ಸೀತೆ—ಹೌದು, ಅವನದೇ.

(ಸ್ವರೂಪವನ್ನು ತಳೆದ ಶೂರ್ಪಣಖೆ ಮತ್ತು ಒರೆಯಿಂದೆಳೆದ ಕತ್ತಿಯನ್ನು ಹಿಡಿದ ಲಕ್ಷ್ಮಣ—ಇವರ ಪ್ರವೇಶ)

ಲಕ್ಷ್ಮಣ—ನಿಲ್ಲು, ನಿಲ್ಲು! ರಾಕ್ಷಸಿಯೇ, ನಿಲ್ಲು!

ರಾಮ—(ಆಲಿಸಿ, ಬಳಿಕ ಕಂಡು) ಲಕ್ಷ್ಮಣ, ಇದೇನು—

ದಾಡೆಯೊ ಭೀಕರ, ಚೆಂಗೂದಲುಗಳು
ಮೇಲಕೆ ನೆಗೆಯುತೆ ನಿಮಿರುತಿವೆ;
ಪರ್ವತದಂತಿದೆ ದೇಹವು, ಬಣ್ಣವು
ಮೇಘದ ಮಡಿಲನು ಹೋಲುವುದು
ತಾಟಕೆಯನ್ನೇ ಕೊಂದಿರ್ಪೆನಗೂ
ಭೀಕರವೆನಿಸಿದೆ ರೂಪವಿದು ||೫||

ಸೀತೆ—(ಗಾಬರಿಯಿಂದ) ಆರ್ಯಪುತ್ರ, ರಾಕ್ಷಸಿಯನ್ನು ತಡೆ, ತಡೆ.

ರಾಮ—ದೇವಿ, ಅಂಜಬೇಡ, ಅಂಜಬೇಡ! ಹಿಂದೆಂದೂ ನೀನು ಚಿತ್ರಶಾಲೆಯಲ್ಲಿ ಪಿಶಾಚಿಯ ರೂಪವನ್ನು ನೋಡಿಲ್ಲವೆ?

ಸೀತೆ—ಹೃದಯವೆ, ಇದೇನಿದು? ಆರ್ಯಪುತ್ರನು ಇಲ್ಲಿಯೇ ಇರುವನು. ಆರ್ಯಪುತ್ರನ ರಕ್ಷಣೆಯಲ್ಲಿರುವ ನಿನಗೆ ನಡುಕವೇಕೆ?

ಶೂರ್ಪಣಖೆ—ಒಳ್ಳೆಯದೇ ಆಯಿತು. ನಾನೂ ಬಹಳ ಹಸಿದಿದ್ದೇನೆ. ತಾಪಸರ ಮಾಂಸವನ್ನು ತಿಂದು ಬೇಸರವೂ ಆಗಿದೆ. ಈಗ ನನ್ನ ಭೋಜನಕ್ಕೆ

ಸುಂದರ ಸುಕುಮಾರರಿಬ್ಬರು ತಾವಾಗಿಯೇ ಸಿದ್ಧವಾದಂತಾಯಿತು. ಇರಲಿ, ಇವರಿಬ್ಬರನ್ನೂ ತಿಂದು ಆಮೇಲೆ ಸೀತೆಯನ್ನು ರಾವಣನಿಗೆ ಬಹುಮಾನವಾಗಿ ಕೊಡುವೆನು! (ಓಡಿಬರುವಳು)

ಲಕ್ಷ್ಮಣ—ಇವಳು ಓಡಿಬರುತ್ತಿರುವಳು—

ಜೃಂಭಿಸಿಹುದು ನೋಡದೊಡಲ ಮುಟ್ಟುತಿರ್ಪ ತೋಳಿದು
ಸುತ್ತುತಿಹಳು ಧರಣಿಚಕ್ರವೆದ್ದು ಬಿದ್ದು ನಡುಗಲು;
ಬಾಯ ಬಿಟ್ಟು ಘೋರವಾಗಿ ಪರಿಯುತಿಹಳು ಬೇಗನೆ
ಅಗುಳಿಯನ್ನು ಕಳೆದು ತೆರೆದ ಬಾಗಿಲುಳ್ಳ ಪುರವೆನೆ! ||೬||

ರಾಮ—ಎಲಎಲಾ, ಇವಳು—

ಬಾನ್ಗೆ ನೆಗೆಯುವಳು ನೆಲದೆ ಸುತ್ತುವಳು ಓಡಿ ನಿಂತು ಮಲೆತು,
ಅಸಿಯ ಮೀರಿಸುವ ನಖದ ಮುಖಗಳಿಂ ನೋಡದೊಡ್ಡ ತರಿದು ||೭||

ಸೀತೆ—ಆರ್ಯಪುತ್ರ, ರಾಕ್ಷಸಿಯನ್ನು ತಡೆ, ತಡೆ!

ರಾಮ—ದೇವಿ, ಹೆದರಬೇಡ, ಹೆದರಬೇಡ!

ಒಳಗೆ ಶೂನ್ಯವಾದ ಯಂತ್ರವೆಂದು ನಂಬು ನೀನಿದಂ
ಪದ್ಮನೇತ್ರೆ, ದಿಟವ ನೋಡಲಿಲ್ಲವಿಲ್ಲಿ ರಕ್ಕಸಿ;
ನೋಡಿದೆನ್ನ ಬಾಣಹತಿಗೆ ಇನಿತು ಸಿಲುಕಿದೊಡನೆಯೆ
ಆರ್ತನಾದ ಗೈಯುತಿನ್ನು ಬೀಳ್ವುದವನಿಗೊಯ್ಯನೆ ||೮||

ಲಕ್ಷ್ಮಣ—ಆರ್ಯನು ಪ್ರಸನ್ನನಾಗಬೇಕು. ಇವಳನ್ನು ನಾನೇ ತಡೆಯುವೆನು. (ಎಂದು ಒಳಗೆ ಹೋಗುವನು)

ಶೂರ್ಪಣಖೆ—ಅಯ್ಯೋ ಕೇಡೆ, ಮಹದಾಶ್ಚರ್ಯವೇ ಸರಿ! ನನಗೆ ಭಕ್ಷ್ಯರೂಪವಾದವರೀಗ ಪರಾಕ್ರಮವನ್ನು ತೋರಿಸಲು ಹೊರಟಿದ್ದಾರೆ!

ಲಕ್ಷ್ಮಣ—ಆ, ನಿನ್ನನ್ನೀಗ ಹಕ್ಕಿಗಳಿಗೆ ಹಂಚಿಹಾಕುವೆನು.

ಶೂರ್ಪಣಖೆ—ಈ ಕಠೋರಹೃದಯನನ್ನೇ ಮೊದಲು ಕೊಂಡೊಯ್ದು ಏಕಾಂತಸ್ಥಳದಲ್ಲಿ ತಿನ್ನುವೆನು.

ಲಕ್ಷ್ಮಣ—ಅಯ್ಯೋ, ನನ್ನನ್ನು ಹಿಡಿದೇ ಬಿಟ್ಟಳು! ಇದೋ ಮೂರ್ಛೆ ಬರುತ್ತಿದೆ!

ರಾಮ—ನಿಲ್ಲು, ನಿಲ್ಲು—

ತಪ್ಪುಗೈದವರಲ್ಲಿ ಮುನಿಗಳೆಲ್ಲವು ನಾವು
ಬಿಡು ನಿನ್ನ ಸಾಹಸವ, ಪಿಡಿದೆನಿದೊ ಧನುವ;
ನಮ್ಮ ಕಣೆಗಳಿಗಿಲ್ಲ ಕರುಣೆಯೆಂಬುದು ನೋಡು
ರಕ್ಕಸಿಯೆ, ರಕ್ಕಸರ ತರಿವೆಡೆಯೊಳೆಂದೂ ||೯||

ಶೂರ್ಪಣಖೆ—ಅಬ್ಬಾ, ಬೆಟ್ಟದ ಶಿಖರಗಳಾದರೂ ಇದಕ್ಕಿಂತ ಹಗುರ!

(ಆಕಾಶಕ್ಕೆ ನೆಗೆದು ಹೋಗುವಳು)

ರಾಮ—(ಶೋಕದಿಂದ) ದೇವಿ, ಈಗಲೂ ಸ್ತ್ರೀಸ್ವಭಾವವನ್ನು ಬಿಡುವುದಿಲ್ಲವೆ?

ಭಯದ ಸಂಗಡ ಧೈರ್ಯವಾನುತೆ
ಬಿಡುವುದೆನ್ನನು ದೇವಿಯೆ;
ಬೇಗ ನೆಗೆವಳು ಮೇಘಮಾರ್ಗದೆ
ಪಿಡಿದು ರಕ್ಕಸಿಯನುಜನಂ ||೧೦||

ಸೀತೆ—ಆರ್ಯಪುತ್ರ, ನನ್ನನ್ನು ರಕ್ಷಿಸುವವರು ಯಾರು?

ರಾಮ—ಕುಮಾರನನ್ನು ತಾನೆ ಯಾರು ರಕ್ಷಿಸಬೇಕು?

ಸೀತೆ—ಅವನ ಕೈಯಲ್ಲಿ ಆಯುಧವಿದೆಯಲ್ಲವೆ?

ರಾಮ—(ದುಃಖದಿಂದ) ರಾಕ್ಷಸಿಯ ತೋಳ ಸೆರೆಯಲ್ಲಿ ಸಿಕ್ಕವನಿಗೆ ಆಯುಧ ದಿಂದ ಏನು ಪ್ರಯೋಜನ.

ಚಿಃ, ಈ ಮಾನುಷಜನ್ಮಕೆ, ನೆಲದೊಳು
ಮಾತ್ರವೆ ನಡೆಯಲು ಶಕ್ತವಿದು;
ರಕ್ಕಸಿಯಕಟಾ ತಮ್ಮನನುಯ್ಯುತೆ
ಎನ್ನಿದಿರೊಳೆ ಮರೆಯಾಗಿಹಳು ||೧೧||

ಸೀತೆ—(ದುಃಖದಿಂದ) ಹಾಳಾದ ನಾನು ಆರ್ಯಪುತ್ರನನ್ನು ತಡೆದುದರಿಂದ ಲ್ಲವೇ ಕುಮಾರನು ಎದೆಗೊಂದು ಶೂಲವಾಗುವಂತಾದುದು!

ರಾಮ—(ಬಾಣವನ್ನೆತ್ತಿಕೊಂಡು) ಯಾವ ದಿವ್ಯಾಸ್ತ್ರಕ್ಕೆ ಇವಳನ್ನು ಗುರಿ ಮಾಡಲಿ?

(ನೇಪಥ್ಯದಲ್ಲಿ)

'ಅಯ್ಯೋ, ಬೀಳಿಸಲ್ಪಟ್ಟೆನಲ್ಲಾ! ಆರ್ಯ, ನೀನೇ ಶರಣು, ಶರಣು!'

ರಾಮು—ಓ, ಸ್ತ್ರೀಯ ದನಿಯಂತಿದೆ. ಇದೇಕೆ ಭೂಮಿ ನಡುಗುವುದು? ಹೌದು, ಲಕ್ಷ್ಮಣನೇ ರಾಕ್ಷಸಿಯನ್ನು ಬೀಳಿಸಿರಬೇಕು.

ಸೀತೆ—ನನಗೂ ಹಾಗೆಯೇ ತೋರುತ್ತದೆ.

ರಾಮು—ಭದ್ರೆ, ಕೈಹಿಡಿದುಕೊಂಡು ನನ್ನ ಹಿಂದೆ ಬಾ. ನಾನು ಲಕ್ಷ್ಮಣನನ್ನು ಹುಡುಕುವೆನು.

ಸೀತೆ—ಯತ್ನಿಸುವೆನು.

(ಇಬ್ಬರೂ ನಡೆಯುವರು)

ರಾಮು—(ನಡೆದು ಬಂದು, ನೋಡಿ) ಅಹಾ,

ಗಿರಿಶಿಲೆಯ ಧಾತುಗಳು ಕೂಡಿದೀ ತೊರೆನೀರು
ಕಾಡೊಳಗೆ ಕೆಂಪಾಗಿ ಹರಿವುದೇನು?
ಬಾಲಾರ್ಕಕಾಂತಿಯಾ ರಕ್ತವೇ ತಾನಿಂತು
ಪ್ರಳಯಮೇಘದಿನೀಗ ಸುರಿವುದೇನು? ||೧೨||

(ಲಕ್ಷ್ಮಣನ ಪ್ರವೇಶ)

ಲಕ್ಷ್ಮಣ—(ಅನುತಾಪದಿಂದ) ಛಿ, ನಾನು ಹೆಂಗಸೆನಿಸಿದವಳ ಮೇಲೆ ಮೊದಲು ಆಯುಧವನ್ನು ಪ್ರಯೋಗಿಸುವಂತಾಯಿತೆ! ಅಥವಾ, ಇದಕ್ಕೆ ಪರಿತಪಿಸಬೇಕಾದ ಅಗತ್ಯವಿಲ್ಲ:—

ನೋಡುತಾಕೆಯ ದುಷ್ಟಭಾವನ,
ತಿಳಿಯುತಣ್ಣನ ದೃಢವನು;
ಎಂತೊ ಶಸ್ತ್ರವನೆಸೆದೆನವಳಾ
ಕಿವಿಗೆ ಮೂಗಿಗೆ ಮಾತ್ರವೆ. ||೧೩||

ಈಗ ಇನ್ನು ಆರ್ಯನನ್ನು ಕಾಣುವೆನು. (ಸಮೀಪಿಸಿ) ಆರ್ಯನಿಗೆ ಜಯವಾಗಲಿ.

ರಾಮು—(ಹರ್ಷದಿಂದ ಅಪ್ಪಿಕೊಂಡು)

ಮನವೆ ನೀಂ ಶಾಂತಿಯನು ತಳೆವುದು
ಕುಶಲಿಯಿಹನೀ ಲಕ್ಷ್ಮಣಂ;
ಅವನ ಸಂಗಡವಿರಲು ಕಾಡೊಳೆ
ಪುರದ ಸುಖವದು ಕುಗ್ಗದು. ||೧೪||

(ಮತ್ತೆ ಅಪ್ಪಿಕೊಂಡು) ಕುಮಾರ, ಆ ರಾಕ್ಷಸಿಯೆಲ್ಲಿ?

ಲಕ್ಷ್ಮಣ—(ಸ್ವಗತ) ಏನೆಂದು ಹೇಳಲಿ? (ತಲೆತಗ್ಗಿಸಿ ನಿಲ್ಲುವನು)

(ಆರ್ತನಾದ ಮಾಡುತ್ತಾ ಶೂರ್ಪಣಖಿಯ ಪ್ರವೇಶ)

ಶೂರ್ಪಣಖಿ—ಹಾ ರಾವಣಾ, ಹಾ ಕುಂಭಕರ್ಣಾ, ಹಾ ವಿಭೀಷಣಾ, ತಾಪಸರ ವೇಷದಲ್ಲಿರುವ ಈ ಮನುಷ್ಯರ ದೌರ್ಜನ್ಯದಿಂದ ನನ್ನನ್ನು ಕಾಪಾಡಿ, ಕಾಪಾಡಿ!

ರಾಮ—ಲಕ್ಷ್ಮಣ, ನೋಡು—

ಸಂಜೆಗೆಂಪಿಡಿದಿರುವ ಮೇಘಮಾಲೆಯು ತೆರದೆ,
ಧಾತುರಸವಿಳಿಯುತಿಹ ಶೈಲದಂತೆ,
ಬಾಲಸೂರ್ಯನ ಬೆಳಕು ಹೊಳೆವ ತರುರಾಜಿಯೊಲು
ನವರಕ್ತ ತಾಮ್ರತನುವೆಸೆವಳಿವಳು. ||೧೫||

ಲಕ್ಷ್ಮಣ—(ಸ್ವಗತ) ಇದು ನನ್ನ ಅದೃಷ್ಟವೇ ಸರಿ. ನನ್ನ ನಿಂದ್ಯಕಾರ್ಯವನ್ನು ಆರ್ಯನು ತಾನೇ ನೋಡಿ ತಿಳಿಯುವಂತಾಯಿತು.

ರಾಮ—ಲಕ್ಷ್ಮಣ, ನೀನು ಮಾಡಿರುವುದು ಯೋಗ್ಯವಾಗಿದೆ. ವಧೆಗೆ ಅರ್ಹರಾದ ಸ್ತ್ರೀಯರಿಗೆ ವಿಹಿತವಾದ ದಂಡವೇ ಇದು.

ಶೂರ್ಪಣಖಿ ಎಂಬವಳು
ದಂಡಕಾರಣ್ಯದೊಳು
ರಾವಣನ ತಂಗಿಯಿರುತಿಹಳು
ಅಕ್ಕ ಖರದೂಷಣರಿಗವಳು. ||೧೬||

ಎಂದು ಕೇಳಿ ಬಲ್ಲೆವು.

ಶೂರ್ಪಣಖಿ—ಮನುಷ್ಯರೆ, ನಿಮ್ಮ ಅವಿನಯವನ್ನು ನೆನಪಿನಲ್ಲಿಡಿರಿ, ನೆನಪಿನಲ್ಲಿಡಿರಿ. ಅದರ ಫಲವನ್ನು ಇನ್ನು ಮುಂದೆ ಕಾಣುವಿರಿ.

ಲಕ್ಷ್ಮಣ—ಆ, ತೊಲಗಾಚೆ!

ಶೂರ್ಪಣಖಿ—ಖರದೂಷಣರಿಗೆ ಈ ನನ್ನ ಅವಸ್ಥೆಯನ್ನು ತೋರಿಸುವೆನು.

(ನಿಷ್ಕ್ರಮ)

ಸೀತೆ—ಆರ್ಯಪುತ್ರ, ಈಗ ಉಸಿರು ಬಂದಿತು. ಪಾಪ, ಇಷ್ಟು ಭಯಂಕರ ರಾಕ್ಷಸಿಯರಿಂದ ತುಂಬಿದ ಈ ವನಪ್ರದೇಶದಲ್ಲಿ ಅಂಥಾ ಚೆಲುವೆಯೂ ಸುಕುಮಾರಿಯೂ ಆದ ಕನ್ಯೆ ಹೇಗಿದ್ದಾಳೋ!

(ರಾಮನು ಲಕ್ಷ್ಮಣನನ್ನು ನೋಡುವನು)

ಲಕ್ಷ್ಮಣ—(ಕಿವಿಯಲ್ಲಿ) ಇಷ್ಟೆ !
ಸೀತೆ—ಆರ್ಯಪುತ್ರ, ಕುಮಾರನು ಹೇಳುತ್ತಿರುವುದೇನು ?
ರಾಮ—ದೇವಿ,

ತುಟಿಯದಿರಲು, ಕಣ್ ಮೀನೆನೆ, ಪರಿಶೋಭಿಪ ಮೊಗದಿಂ
ಕುಚಭಾರದೆ ನಡುಬಾಗಿರೆ, ಪೃಥುವಾಗಿರೆ ಜಘನಂ ;
ನಸುನಾಣ್ಚುತೆ, ಇನಿಸಳ್ಕುತೆ ನೂರಡಿಯಿಟ್ಟವಳೀ
ಭಯಕಾರಣ ನಿನಗಾದಳು ವಿಧಿ ಮುನಿದಿರಲವರಾ ||೧೭||

ಸೀತೆ—ಸುಳ್ಳು, ಇದು ಸುಳ್ಳು.
ರಾಮ—ಲಕ್ಷ್ಮಣನೇ ಹೇಳುತ್ತಿದ್ದಾನೆ !
ಸೀತೆ—ಅಬ್ಬಾ, ಅವಳಲ್ಲಿ ನಾನು ಅಷ್ಟೊಂದು ನಂಬಿಕೆಯಿಟ್ಟಿದ್ದೆ! ಆರ್ಯಪುತ್ರನು ತಪ್ಪಿಸಿದುದು ಸರಿಯೇ ಆಯಿತು.
ರಾಮ—ವತ್ಸ, ಲಕ್ಷ್ಮಣ, ಮುಂಚೆ ಅವಳು ನಿನಗೆ ಗೊತ್ತಾದುದು ಹೇಗೆ?
ಲಕ್ಷ್ಮಣ—(ನಗುತ್ತಾ) ದಾಕ್ಷಿಣ್ಯ ಅತಿಶಯವಾಗಿರುವುದರಿಂದ ಆರ್ಯನು ಎಲ್ಲಿಯೂ ದೋಷವನ್ನು ಕಾಣುವುದೇ ಇಲ್ಲ! ಉಷ್ಣತೆಯನ್ನು ಅಗ್ನಿಯಿಂದ ಬಚ್ಚಿಡುವುದಕ್ಕಾದೀತೆ ?
ರಾಮ—ಇದು ನಿಜ.

ದಾಕ್ಷಿಣ್ಯದಿಂ ಮೃದುತೆಯಾಂತ ಜನ ಸುಲಭದಲಿ
ಇತರ ವಶವರ್ತಿಗಳು ತಾವೆನಿಪರು ;
ಕಂಟಕವ ಕಿಳ್ತೊಗೆವೆವೆಂಬ ದೃಢವುಳ್ಳರಿಗೆ
ಬಳ್ಳಿಗಳೆ ಬಳುಕುವುವು ಮುಳ್ಳನುಳಿದು. ||೧೮||

ಅವಳು ಎಲ್ಲ ಹೆಂಗಸರಂತೆ ಎಂದು ಅಲಕ್ಷ್ಯಮಾಡುವಂತಿಲ್ಲ. ನೀನು ಸಾಧಿಸಿರುವುದು ದುಷ್ಕರವಾದ ಕೆಲಸ !

(ಲಕ್ಷ್ಮಣನು ತಲೆಯನ್ನು ತಗ್ಗಿಸುವನು)

ಸೀತೆ—ಆರ್ಯಪುತ್ರ, ಈಗಲೂ ರಕ್ಕಸಿಯನ್ನೇ ನೋಡುತ್ತಿರುವೆನೋ ಎನಿಸುತ್ತದೆ.
ರಾಮ—ತ್ರಿಭುವನರಿಪುವಾ ರಾವಣನೀಕೆಯ

ಪೂರ್ವಜನೆನಿಸಲು ಕಾರ್ಮುಕಕೆ

ವಿಶ್ರಮವೆಂಬುದು ಸುಲಭವದಾಗದು
ರಾಕ್ಷಸವೈರವೆ ಒದಗಿಹುದು ;
ರಾಕ್ಷಸರೆಲ್ಲರ ವಧೆಯಿಂದಿದೆ ತಾಂ
ಲೋಕಕೆ ಸುಖವನು ಕರುಣಿಸಲಿ. ||೧೯||

ಸೀತೆ—ಆರ್ಯಪುತ್ರ, ನೋಡು, ನೋಡು—ರಾಕ್ಷಸಿಯ ರಕ್ತದ ಕೆಸರನ್ನು ಸಂಜೆಗೆಂಪಿನ ಕಿರಣಗಳಿಂದ ಭಗವಾನ್ ಸೂರ್ಯನೇ ಎತ್ತಿಕೊಂಡು ಮರದ ತುದಿಗಳಿಗೆ ಬಳಿಯುತ್ತಿರುವನೋ ಎನಿಸುವುದು !

ರಾಮ—ಸಂಜೆಯಾಗುತ್ತಿದೆ. ವತ್ಸ, ಲಕ್ಷ್ಮಣ—

ಅಸಿಯನಿಡು, ಸಡಿಲಿಸೀ ಬಿಲ್ಲ ಹೆದೆಯನು ಇನ್ನು
ಪಾವನ ಜಲಂಗಳೊಳು ಮಿಂದು ಮಡಿಯಾಗ ;
ಗೈದು ಪ್ರಾಣಾಯಾಮ ಮಂತ್ರಜಪಗಳನೀಗ
ಸಂಧ್ಯೆಯಾರಾಧನೆಯ ವಿಧಿಯ ಮುಗಿಸೋಣ ! ||೨೦||

ಲಕ್ಷ್ಮಣ—ಆರ್ಯನ ಅಪ್ಪಣೆ. (ಹಾಗೆಯೇ ಮಾಡುವನು)

ರಾಮ—ಇದೋ ನೋಡು—

ಚಕ್ರಪಾಣಿಯು ಕಾಲಿನಿಂದೊದೆಯಲ್ಕೆ ಗಕ್ಕನೆ ಗಗನದಿಂ
ರಕ್ತಕಣಗಳ ಸುರಿಸಿ ರಭಸದೆ ಕೆಳಗೆ ಬೀಳುವ ನಮುಚಿಯಂ
ಪೋಲುವೀ ರವಿ ದಾಸವಾಳದ ಕೆಂಪು ಮಿರುಗುವ ಕರಗಳಿಂ
ಅರುಣಗೊಳಿಸುತ್ತಿರ್ಪನಿಂತಿದೊ ದಿಙ್ಮುಖಂಗಳನೆತ್ತಲುಂ ||೨೧||

(ನಿಷ್ಕ್ರಮ—ಎಲ್ಲರೂ)

**ಇಲ್ಲಿಗೆ ಎರಡನೆಯ ಅಂಕ ಮುಗಿದುದು.**

# ಮೂರನೆಯ ಅಂಕ

( ಬಳಲಿದ ಋಷಿಕುಮಾರನ ಪ್ರವೇಶ )

ಋಷಿಕುಮಾರ—ಸೂರ್ಯವಂಶವು ಚಿರಕಾಲ ಬಾಳಲಿ ! ಅದನ್ನಲಂಕರಿಸುವ ರಾಮನು ಖರದೂಷಣರೇ ಕರ್ಣಧಾರರಾಗಿದ್ದ ರಾಕ್ಷಸಸೇನೆಯನ್ನು ಜನಸ್ಥಾನದಿಂದ ಯಮಸ್ಥಾನಕ್ಕೆ ಅಟ್ಟಿದ್ದರಿಂದ, ಈಗ ನನ್ನಂತಹವರೂ ಕೂಡ ಅಡೆತಡೆಗಳಿಲ್ಲದೆ ಈ ವನಪ್ರದೇಶದಲ್ಲಿ ಸ್ವೇಚ್ಛೆಯಿಂದ ಸಂಚರಿಸುವಂತಾಗಿದೆ. ಈಗ ಇನ್ನು ರಾಮನ ಆಶ್ರಯ ಸಿಕ್ಕಿರುವುದರಿಂದ ರಾಕ್ಷಸರ ಜೀವಗಳ ರುಚಿಯಿಳಿದ ಮೃತ್ಯುವಿನ ನಾಲಗೆಯು ಲಂಕೆಯನ್ನೂ ನೆಕ್ಕಬಹುದು. (ಸ್ವಲ್ಪ ನಡೆದು) ಈಗ ಎಲ್ಲಿ ಹೋಗಿ ತೀರ್ಥಯಾತ್ರೆಯಿಂದಾದ ಬಳಲಿಕೆಯನ್ನು ಉಪಶಮನಮಾಡಿಕೊಳ್ಳಲಿ? (ನಡೆಯುತ್ತಾ, ನೋಡಿ) ಇಲ್ಲಿ ಹತ್ತಿರದಲ್ಲಿಯೇ ಆಶ್ರಮವಿರಬೇಕು. ಏಕೆಂದರೆ—

ನದಿಯ ಮಳಲಿದು ಕೀರ್ಣದರ್ಭೆಗಳಿಂದೆ ಶಾಮಲವಾಗಿದೆ
ಮುನಿಗಳೋದಿಸೆ ಗಿಳಿಯು ಕೊಂಬಿನೊಳಿನಿದು ನುಡಿಗಳನುಲಿದಿದೆ ;
ತಾಯ ಕೆಚ್ಚಲನುಳಿಯುತೆನ್ನೆಡೆ ಪುಲ್ಲೆಮರಿಯೈತರುತಿವೆ
ಜಡೆಯು ನಾರುಡೆ ತೊಗಲು ಕಾಣಲು ತೊಲಗಲಂಜಿಕೆಯೆಲ್ಲವು
ಮುನಿಕುಮಾರರು ಕಾಳನೀಯುತೆ ಸಾಕಿ ಸಲಹಿರುವಿವುಗಳು ॥೧॥

ಇಲ್ಲಿ ವೇದಾಧ್ಯಯನ ಕೇಳಿಸದು ! (ವಿಚಾರ ಮಾಡುತ್ತಾ) ಹೋಮದ ಹೊಗೆ ಕಾಣಿಸದು ! (ಪ್ರವೇಶಿಸಿ, ನೋಡಿ) ಈ ಆಶ್ರಮವನ್ನು ಬಿಟ್ಟು ಎಲ್ಲರೂ ಹೋಗಿ ಹೆಚ್ಚು ಕಾಲ ಕಳೆದಂತಿಲ್ಲ. ಹೇಗೆಂದರೆ—

ಹೋಮಗಂಧವ ಬೀರುತಿರ್ಪುದು ದರ್ಭೆ ಹರಡಿದ ವೇದಿಯು
ಬಲಿಯೆಡೆಯ ಬೆಂಬಿಡದೆ ಮುಸುರಿವೆ ದುಂಬಿವಿಂಡುಗಳಿತ್ತಲು ;
ಇಲ್ಲಿ ಮರಗಳ ಕೊಂಬಿನಿಂದಹ ಜೋಲುತಿರುವೀ ನಾರುಡೆ
ತಳಿರ ಕೆಂಪನೆ ನಾಡೆಯಿಮ್ಮಡಿಸಿರ್ಪುದೆಂಬೆನು ನೋಳ್ಪೊಡೆ ॥೨॥

ಇಲ್ಲಿ ಯಾರಾದರೂ ಇದ್ದರೆ ಕರೆದು ನೋಡುವೆನು. ನಾನು ಅತಿಥಿ ! ಯಾರಿಲ್ಲಿ ಇರುವವರು ?

(ನೇಪಥ್ಯದಲ್ಲಿ)

'ಅತಿಥಿಗೆ ಸುಸ್ವಾಗತ; ಇತ್ತ ಬರಬೇಕು.'

ಋಷಿಕುಮಾರ—ಶೂನ್ಯವಾದಂತಿಲ್ಲ.

(ಪ್ರಯಾಣದ ಸನ್ನಾಹದಲ್ಲಿರುವ ವೃದ್ಧತಾಪಸನ ಪ್ರವೇಶ)

ವೃದ್ಧತಾಪಸ—ಅತಿಥಿಗೆ ಸುಸ್ವಾಗತ! ಇತ್ತ ಬರಬೇಕು.

ಋಷಿಕುಮಾರ—ತಪೋಧನ, ಈ ದೊಡ್ಡ ಆಶ್ರಮದಲ್ಲಿ ನೀನೊಬ್ಬನೇ ಉಳಿದಿರುವಂತೆ ಕಾಣುವುದಲ್ಲ!

ವೃದ್ಧತಾಪಸ—ಇದು ಪೌಲಸ್ತ್ಯನ ಬಂಧುವಾದ ಮಾರೀಚನ ಆಶ್ರಮ.

ಋಷಿಕುಮಾರ—ಕೌಶಿಕಪುತ್ರರ ಪ್ರೀತಿಗಾಗಿ ರಾಮಬಾಣಕ್ಕೆ ಸಿಕ್ಕಿ ಉಳಿದವನೆಂದು ಕೇಳಿದ್ದೇನೆ. ಅವನೇ ತಾನೆ?

ವೃದ್ಧತಾಪಸ—ಹೌದು. ರಾವಣನ ತಂಗಿ ಶೂರ್ಪಣಖೆಯೆಂಬವಳೊಬ್ಬಳಿರುವಳು.

ಋಷಿಕುಮಾರ—ತಡೆ, ತಪೋವನದಲ್ಲಿ ರಾಮನ ಅಪ್ಪಣೆಯಂತೆ ಸಂಚರಿಸುತ್ತಿದ್ದ ಲಕ್ಷ್ಮಣನ ಬಾಯಿಂದಲೇ ಶೂರ್ಪಣಖೆಯ ವಿರೂಪಕರಣವನ್ನೂ ಖರದೂಷಣರ ವಧೆಯನ್ನೂ ನಾನು ಕೇಳಿಯಾಗಿದೆ. ಈ ಮಾರೀಚನ ವೃತ್ತಾಂತ ಮಾತ್ರ ನನಗೆ ಗೊತ್ತಿಲ್ಲ.

ವೃದ್ಧತಾಪಸ—ಆಮೇಲೆ ಸಿಟ್ಟಿಗೆದ್ದ ರಾವಣನು ಮಾರೀಚನ ಆಶ್ರಮಕ್ಕೆ ಬಂದನು.

ಋಷಿಕುಮಾರ—ಆಮೇಲೆ?

ವೃದ್ಧತಾಪಸ—ಆಮೇಲೆ—'ನೀನು ಹುಲ್ಲೆಯ ರೂಪಿನಿಂದ ರಾಮನನ್ನು ವಂಚಿಸಿ ದೂರಕ್ಕೆ ಕರೆದುಕೊಂಡು ಹೋಗು; ಅಷ್ಟರಲ್ಲಿ ನಾನು ಸೀತೆಯನ್ನು ಸ್ವೀಕರಿಸುವೆನು' ಎಂದು ಬಹಳವಾಗಿ ಅವನನ್ನು ನಿರ್ಬಂಧಪಡಿಸಿದನು.

ಋಷಿಕುಮಾರ—ಆಮೇಲೆ?

ವೃದ್ಧತಾಪಸ—ಆ ಬಳಿಕ ರಾಮನ ಮಹತ್ತ್ವವನ್ನು ಬಹಳವಾಗಿ ಬಣ್ಣಿಸಿ ಮಾರೀಚನು ಮೌನವನ್ನು ತಾಳಿದನು.

ಋಷಿಕುಮಾರ—ತಪೋನುಷ್ಠಾನಕ್ಕೆ ತಕ್ಕ ವರ್ತನೆ! ಆಮೇಲೇನಾಯಿತು?

ವೃದ್ಧತಾಪಸ—ಆಗ ಕುಪಿತನಾದ ರಾವಣನು—

ಹುಬ್ಬನು ಗಂಟಾಗಿಸಿ ನಗುತೊರೆಯಿಂ
ದೆಳೆದನು ಪೊಳೆಯುವ ಕೂರಸಿಯು ;
ಅಲಗದು ಸುರಗಜದಂತಕ್ಕೆರಗುತೆ
ವಿಷಮತೆಯಾಂತುದು ಕಾಣುತಿರೆ ||೩||

ಋಷಿಕುಮಾರ—ಅದರಲ್ಲಿ ವಿಸ್ಮಯವೇನೂ ಇಲ್ಲ. ಮುಂದೇನಾಯಿತು ?

ವೃದ್ಧತಾಪಸ—ಆಗ ತತ್‌ಕ್ಷಣವೇ ಸಾಯುವ ಅಂಜಿಕೆಯಿಂದಲೋ, ಅಥವಾ ಪೂರ್ವವೈರದ ಸ್ಮರಣೆಯಿಂದಲೋ ಅಂತೂ ಅವನು ರಾವಣನಿಗೆ ವಿಧೇಯನಾಗಲು ಸಮ್ಮತಿಸಿದನು.

ಋಷಿಕುಮಾರ—ಯಾವಾಗಲೂ ಜನ್ಮಕ್ಕನುಸಾರವಾಗಿಯೇ ವರ್ತನೆಯಿರುತ್ತದೆ. ಏಕೆಂದರೆ—

ಮರೆಯಾಗಿರ್ದೊಡಮೆಂತುಂ
ಧರೆಯೊಳ್ ಕೀಳ್ಜನರ ಜನ್ಮಸಹಜಂ ರೂಪಂ ।
ತರುಬೀಜಗುಣಂ ಫಲದೊಳ್
ಪರಿಣಮಿಸುವ ಮಾಳ್ಕೆಯಿಂದೆ ತೋರ್ಪುದು ಕಡೆಯೊಳ್ ||೪||

ಆಮೇಲೆ ?

ವೃದ್ಧತಾಪಸ—ಆಮೇಲೆ ರಾವಣನಿಂದ ಅಪವಿತ್ರವಾದ ಈ ಆಶ್ರಮವನ್ನು ಬಿಟ್ಟು ತಾಪಸರೆಲ್ಲರೂ ಬೇರೆ ಕಡೆಗೆ ಹೋದರು. ನಾನೂ ಹೊರಡುವ ಆತುರದಲ್ಲಿರುವುದು ನಿನಗೆ ಕಾಣುತ್ತಲೇ ಇದೆ.

ಋಷಿಕುಮಾರ—ಹಾಗಾದರೆ ತಾವು ಹೊರಡೋಣವಾಗಲಿ. ನಾನೂ ಇಲ್ಲಿಂದ ಹೋಗುವೆನು.

ವೃದ್ಧತಾಪಸ—ಒಳ್ಳೆಯದು.

(ನಿಷ್ಕ್ರಮ—ಇಬ್ಬರೂ)

**ಇದು ವಿಷ್ಕಂಭಕ**

(ಸೀತೆಯೊಡನೆ ರಾಮನ ಪ್ರವೇಶ)

ರಾಮ—(ದುಶ್ಶಕುನವನ್ನು ಕಂಡು) ದೇವಿ, ಇದೇನು ಇಂದು—

ಭರತಂ ಬಾಲನೆನುತ್ತೆ ವೈರಿಗಳದೇಂ ಸಾಕೇತಮಂ ಕೊಂಡರೋ ?
ದಿವಕ್ಕೈದಿರ್ಪರೊ ಶೋಕಭಾರದಿನಣಂ ತಾಯಂದಿರುಂ ಎನ್ನಯಾ ?
ದನುಜರ್ ರೋಷದೆ ಗೈವ ಮಾಯೆಯಹುದೋ ಮತ್ತಾ ಖರಂ
ಸತ್ತಿರಲ್ ?
ತಿಳಿಯೆಂ ಕೆತ್ತುವುದಿಂದು ವಾಮಭುಜಮೇ ತ್ವತ್ಕೇಶಬಂಧೋಚಿತಂ ॥
॥೫॥

ಸೀತೆ—ಆರ್ಯಪುತ್ರ, ತಪಸ್ಸೇ ಅಮಂಗಳಕ್ಕೆ ಶಾಂತಿಯಲ್ಲವೇ ?

(ಮಾರೀಚನ ಪ್ರವೇಶ)

ಮಾರೀಚ—(ಚಿಂತಿಸುತ್ತಾ)

ಬಂಧುಸ್ನೇಹವೊ, ಎನ್ನಯ ಜನ್ಮದ
ದೋಷವು ಪಿರಿದೆನಲೊಡರಿಸಿತೋ ;
ಸುಜನರ ವರ್ತನೆಯನು ತೊರೆಯುತ್ತಲೆ
ಇದೋ ಕೈಕೊಂಡೆನು ಕಪಟವನು ॥೬॥

ಅಥವಾ, ಹೆಚ್ಚು ಮಾತೇಕೆ ?—

ರಾಮನಾಮವನಾಂತ ಪರಮಪುರುಷನ ಶರಕೆ
ಗುರಿಮಾಡಿ ಕಾಯವನು ಮೊದಲೆ ನಾನು ;
ಯಮಲೋಕವನು ಸಾರ್ದು ಮಿಕ್ಕೆಲ್ಲ ರಕ್ಕಸರು
ಅಲ್ಲಿಗೈತರುವುದನೆ ಕಾಯುತಿರುವೆ ॥೭॥

ಆ ರಾಮನ ಆಶ್ರಮವಿರುವುದೆಲ್ಲಿ ? ಅಲ್ಲಿ ವಿಚಿತ್ರಮೃಗದ ರೂಪದಿಂದ ಸಪತ್ನೀಕನಾದ ರಾಮನನ್ನು ಮರುಳುಗೊಳಿಸಬೇಕಾಗಿದೆ.

(ಕವಚ ಧರಿಸಿದ ಲಕ್ಷ್ಮಣನ ಪ್ರವೇಶ)

ಲಕ್ಷ್ಮಣ—‘ ಖರದೂಷಣರ ವಧೆಯಿಂದ ಜನಸ್ಥಾನದಲ್ಲಿ ಪೀಡೆ ತೊಲಗಿದಂತಾಯಿತು. ಆದುದರಿಂದ ನೀವು ಎಂದಿನಂತೆ ನಿಮ್ಮ ಆಶ್ರಮಗಳನ್ನಲಂಕರಿಸಿರಿ ’ ಎಂಬ ಆರ್ಯನ ಮಾತನ್ನು ಮುನಿಗಳಿಗೆ ಹೋಗಿ ತಿಳಿಸಿದಾಗ, ಅವರು ಸಂತೋಷದಿಂದ ಅನುಗ್ರಹಿಸಿ ಕೊಟ್ಟ ಕವಚ

ಇದು. ಅಕಾಲವಾದರೂ ಇದನ್ನು ಧರಿಸಿಕೊಂಡೇ ಇದ್ದೇನೆ. ಅಲ್ಲದೆ ಅವರೇ ಅತ್ತಿಗೆ, ಅಣ್ಣ, ಇವರಿಗೂ ಒಡವೆಗಳನ್ನು ಕೊಟ್ಟು ಕಳುಹಿಸಿದ್ದಾರೆ—

ಮೈಯೊಳು ಧರಿಸಲು ಪಗೆಗಳ ಮಾಯೆಯ
ನೆಲ್ಲವ ಸೂಚಿಪ ಗುಣವುಳ್ಳ ;
ಆಶ್ಚರ್ಯದ ಮಣಿಯಂತುಂಗುರವನು
ತಂದಿಹೆ ರತ್ನನಿಬದ್ಧವನು ||೮||

ಈಗ ಆರ್ಯನನ್ನು ಸಮೀಪಿಸುವೆನು. (ಸಮೀಪಿಸಿ) ಆರ್ಯನಿಗೆ ಜಯವಾಗಲಿ.

ರಾಮ—(ನೋಡಿ) ಲಕ್ಷ್ಮಣನನ್ನು ನೋಡಿದರೆ ಅನುಗ್ರಹವನ್ನು ಪಡೆದು ಬಂದಂತೆ ಕಾಣುತ್ತದೆ. ಲಕ್ಷ್ಮಣ, ವಂದ್ಯರಾದ ಮುನಿಜನರನ್ನು ನೋಡಿ ಬಂದೆಯಾ ?

ಲಕ್ಷ್ಮಣ—ಬೇರೆಬೇರೆಯಾಗಿಯೂ ನೋಡಿದ್ದೆ ; ಒಟ್ಟಿಗೆಯೂ ನೋಡಿದ್ದೆ. ತಾವು ಹೇಳಿದ್ದನ್ನು ಬಿನ್ನವಿಸಿದೆ.

ರಾಮ—(ಆಸನದಿಂದ ಎದ್ದು) ಪರಾಪರಜ್ಞಾನಿಗಳು ಏನೆಂದು ಆಜ್ಞಾಪಿಸಿದ್ದಾರೆ ?

ಲಕ್ಷ್ಮಣ—ಆರ್ಯ, ಕೇಳು—

ರಕ್ತಕಣಗಳು ತುಂಬಿ ಗೋದಾವರಿಯ ನೀರಿದು ಸಂಜೆಯ
ಮುಗಿಲ ಬಣ್ಣವನಾಂತುದದರಿಂ ಸಲ್ಲದೆಮ್ಮಯ ನೇಮಕೆ ;
ಭೂಮಿತಲವೇ ವಿಷಮವಾಗಿದೆ ಎಲ್ಲಿ ನೋಡಿದರಲ್ಲಿಯೆ
ಬೆಟ್ಟದಂತಿಹ ಹೆಣಗಳೊಟ್ಟಲು ಬಿದ್ದು ಕೊಳೆಯುತಲಿರ್ಪುದು ||೯||

ಆದ್ದರಿಂದ ಇನ್ನೂ ಕೆಲವು ದಿನಗಳು ಇಲ್ಲಿಯೇ ಇದ್ದು ನಾವು ನಿನಗೆ ಆಶೀರ್ವದಿಸುತ್ತಿರುವೆವು.

ರಾಮ—ಮುನಿಗಣವೆಂದೂ ನಿರ್ಬಂಧಕ್ಕೆ ವಿಷಯವಲ್ಲ.

ಲಕ್ಷ್ಮಣ—ಇವನ್ನು ನೋಡಿ ಅನುಗ್ರಹಿಸಬೇಕು. (ಆಶ್ಚರ್ಯ ಚೂಡಾಮಣಿಯನ್ನೂ ಅದ್ಭುತ ಉಂಗುರವನ್ನೂ ತೋರಿಸುವನು)

ರಾಮ—(ನೋಡಿ ವಿಸ್ಮಯದಿಂದ) ಆಶ್ಚರ್ಯ, ಆಶ್ಚರ್ಯ !

ಸೀತೆ--ಅಚ್ಚರಿಯೇ, ಅಚ್ಚರಿ !

ರಾಮ—ಪೂಜ್ಯರು ಫಲವೇನೆಂದರು ?

ಲಕ್ಷ್ಮಣ—ಆರ್ಯ,

“ ತಳತಳಿಪ ಕಿರಣಗಳ ಮಣಿಯಿದನು ಅಂತೆ
ಗಟ್ಟಿಚಿನ್ನದೆ ಗೈದ ಉಂಗುರವನಾರು
ಧರಿಸುವರೊ ಅವರನ್ನು ಸೋಂಕಿದೊಡನೆಯೆ ಮಾಯೆ
ಸರಿಯುವುದು ರಕ್ಕಸರ ನಿಜರೂಪು ಬಹುದು ” ||೧೦||

ಎಂದು. ಆರ್ಯನು ಚಿತ್ತೈಸಬೇಕು. ಮಹರ್ಷಿಗಳ ಶಾಸನವನ್ನು ಮೀರುವಂತಿಲ್ಲ. (ಒಪ್ಪಿಸುವನು)

ರಾಮ—ಲಕ್ಷ್ಮಣ, ನಿರತಿಶಯವಾದ ಆನಂದಕ್ಕಾಗಿ ತಪಿಸುತ್ತಿರುವ ಆ ಮುನಿ ವರ್ಗವು ಕವಚದ ಫಲವನ್ನು ಕುರಿತು ಹೇಳಿದ್ದೇನು ?

ಲಕ್ಷ್ಮಣ—ಮರ್ಮಗಳನ್ನು ಬಾಣಗಳಿಂದ ರಕ್ಷಿಸುವುದೆಂದು.

ರಾಮ—ಹಾಗಾದರೆ, ಸಿದ್ಧಾರ್ಥರಾದ ತಪಸ್ವಿಗಳ ಪ್ರೀತಿಲತೆಯ ಕುಸುಮ ವನ್ನು ಸ್ವೀಕರಿಸುವೆನು, ಇಲ್ಲಿ ಕೊಡು. (ಚೂಡಾಮಣಿಯನ್ನು ತೆಗೆದು ಕೊಂಡು ಸೀತೆಯ ಕೇಶಪಾಶದಲ್ಲಿ ಕಟ್ಟುವನು; ಉಂಗುರವನ್ನು ತನ್ನ ಕೈ ಬೆರಳಿನಲ್ಲಿ ಧರಿಸುವನು.)

ಸೀತೆ—(ವಿಸ್ಮಯದಿಂದ ನೋಡುತ್ತಾ) ಆರ್ಯಪುತ್ರ, ಮತ್ತೊಂದು ಆಶ್ಚರ್ಯ ! ಇದೇನಿದು ?

ರಾಮ—ಲಕ್ಷ್ಮಣ, ವನಾಂತದ ಸ್ವರೂಪವೇ ಹೇಗೆ ಬದಲಾಯಿಸಿತು, ನೋಡು.

ಲಕ್ಷ್ಮಣ—ನೋಡುತ್ತಿದ್ದೇನೆ—

ಆವನದು ? ಏತೆರವು ? ಎತ್ತಣದು ? ತೇಜವಿದು
ಕಾನನವನೆಲ್ಲೆಡೆಗೆ ಬೆಳಗುತಿಹುದು ;
ಮೋಡವಿಲ್ಲದೆ ನೆಗೆದ ಸೆಳೆಮಿಂಚಿನಿಂದೀಗ
ತರುಗಣವ ಲೇಪಿಸಿದ ತೆರದಿನಿಹುದು ||೧೧||

(ನೇಪಥ್ಯದಲ್ಲಿ ಎಲೆಗಳ ಮರ್ಮರಧ್ವನಿ. ಎಲ್ಲರೂ ವಿಸ್ಮಯದಿಂದ ನೋಡುವರು)

ರಾಮ—

ಮೇಘಮಾರ್ಗದಲಿ ನೆಗೆವ ಬೆಳಕಿಂದೆ ನಡೆಯೆಡೆಯ ಭಂಗಿಯಿಂದೆ
ಇಂದ್ರಚಾಪವೇ ಮೂಡೆ ಬಾನೊಳಗೆ ಕಣ್ಣು ಕೋರೈಸುವಂತೆ;
ಬೆಳ್ಳಿಕಾಲುಗಳ, ರತ್ನಕಂಧರದ, ಹೇಮತನು ತಳತಳಿಸುವ
ತರುಣ ಹರಿಣವನು ತರುಣಿ ನೋಡು ನೀ ಹರಿಣಾಕ್ಷಿ ವಹಿಲದಿಂದ.

ಸೀತೆ—ಆರ್ಯಪುತ್ರ, ವನವಾಸವೆಂಬುದು ಅದ್ಭುತರಸದ ಆವಾಸವೇ ಸರಿ.

ರಾಮ—ದೇವಿ, ನಿನಗೆ ಇದರಲ್ಲಿ ಆಸೆಯುಂಟೆ ?

ಸೀತೆ—ಆರ್ಯಪುತ್ರ, ಯಾರ ಉದ್ಯಾನದಲ್ಲಿ ಈ ಹುಲ್ಲೆಯಿರುವುದೋ ಅವರಿಗೆ ಬೇರೆ ಸಮೃದ್ಧಿಯಿಂದೇನಾಗಬೇಕು ?

ರಾಮ—ನನಗೂ ಹಾಗೆಯೇ ತೋರುತ್ತದೆ.

ಸೀತೆ—ಈ ಹುಲ್ಲೆಯು ಆರ್ಯಪುತ್ರನ ಸಮೀಪಕ್ಕೆ ಬರಬಾರದೆ !

ರಾಮ—ಜೀವಸಹಿತವಾಗಿ ಹಿಡಿಯಲಾಗದಿದ್ದರೆ, ಇದರ ಅಂಗಗಳು, ಚರ್ಮ ಇವುಗಳಿಂದಾದರೂ ರತ್ನವಂತರಾಗುವೆವು.

ಲಕ್ಷ್ಮಣ—ಆರ್ಯ, ಇದು ರಾಕ್ಷಸರ ಮಾಯೆಯಾಗಿರಲಾರದೆ ?

ರಾಮ—ಹೇಗೇ ಆದರೂ ಇದನ್ನು ಹೊಡೆಯಲು ಯತ್ನಮಾಡಬೇಕಾದ್ದೇ.

ನಿಜದ ಹುಲ್ಲೆಯೆ ಆದೊಡೀಕೆಯ
ಮನದ ಬಯಕೆಯು ಫಲಿಪುದು ;
ಮತ್ತೆ ಮಾಯಾಮೃಗವೆಯಪ್ಪೊಡೆ
ತವೆ ಪರೀಕ್ಷೆಗೆ ಯೋಗ್ಯವು ||೧೩||

ಲಕ್ಷ್ಮಣ—ಆರ್ಯನು ಅನುಗ್ರಹಿಸಬೇಕು. ( ಹೊರಡಲನುವಾಗುವನು )

ರಾಮ—ನಿಲ್ಲು. ದೇವಿಯ ರಕ್ಷಣೆ ನಿನಗೆ ಸೇರಿದ್ದು. ಅಲ್ಲದೆ—

ಕಾಡಿಂದ ಕಾಡಿಂಗೆ ಅಲೆದಲೆದು ಬಂದಿರುವೆ
ದೂರಗತ ಮುನಿಗಳನು ನೋಡಿಕೊಂಡು ;
ಹಣೆಯ ಮೇಲಿಳಿಯುತಿಹ ಬೆವರ ಹನಿಗಳ ಸಾಲು
ಗೊಂಚಲನು ಹೆಣೆವಂತೆ ಕಂಗೊಳಿಸಿದೆ ||೧೪||

ಲಕ್ಷ್ಮಣ—ಆಗಲಿ. ಹೇಳಿದಂತೆ ಮಾಡುವುದೇ ವಿಧೇಯತೆ.

ರಾಮ—ಇದು ದೂರಕ್ಕೆ ಹೋಗುವುದರೊಳಗಾಗಿಯೇ ನನ್ನ ಬಿಲ್ಲನ್ನು ತಂದು ಕೊಡು.

ಲಕ್ಷ್ಮಣ—ಆರ್ಯನ ಅಪ್ಪಣೆ.

ರಾಮ—( ಬಿಲ್ಲನ್ನು ಹಿಡಿದು ನಿಷ್ಕ್ರಮ )

ಲಕ್ಷ್ಮಣ—ಅಯ್ಯೋ, ಇದೇಕೋ ಸುಖಾಂತವಾಗುವಂತೆ ಕಾಣುವುದಿಲ್ಲ. ಈ ಹುಲ್ಲೆಯು—

ಮರಕತಮಯ ಕಂಧರವನು ತಿರುತಿರುಗಿಸುತಿರ್ಕುಂ
ನವತೃಣವನು ಜಿಹ್ವಾಗ್ರದೆ ಸೋಂಕುವವೋಲ್ ಪರಿಗುಂ ;
ಮರದೆಡೆಯಲಿ ಸುಳಿಸುಳಿಗುಂ ಮೇಲ್‌ಕಾಂಬುದು ಕೆಳಗುಂ
ಮುಳಿದಣ್ಣನು ಬಿಲ್ಲೆಳೆಯಲು ಮರೆಯಪ್ಪುದು ನೆಲದೊಳ್ ||೧೫||

ಅಕಟಾ, ಕಣ್ಣಿಗೆ ಇನ್ನು ಆಚೆ ಯಾವುದೂ ಕಾಣದು.

ಸೀತೆ—ಅಯ್ಯೋ, ಆರ್ಯಪುತ್ರನು ಕಣ್ಣಳತೆಯನ್ನೂ ದಾಟಿಹೋದನೇ !

(ರಥದಲ್ಲಿ ರಾವಣ, ಶೂರ್ಪಣಖಿ, ಸಾರಥಿ ಇವರ ಪ್ರವೇಶ)

ಬದುಕಿರಲು ನಾನಿಂದು ನರನಿಂದಲವಮಾನ
ಬಂದಿತೆನ್ನುವ ಕೊರಗನುಳಿಯಲೀ ತಂಗಿ ;
ಕುಟ್ಟಿ ಕೆಡಹುತೆ ಪತಿಯನುಯ್ವೆನಾ ಸೀತೆಯನು
ಸಾರಥಿಯೆ, ಹಯಗಳನು ನೂಕು ನೀ ಬೇಗ ||೧೬||

ಸಾರಥಿ—ಆಯುಷ್ಮಂತನ ಅಪ್ಪಣೆ. (ರಥವನ್ನು ಓಡಿಸುವನು)

ಶೂರ್ಪಣಖಿ—ಆರ್ಯ, ಗಡಿಬಿಡಿ ಮಾಡಬೇಡ. ಮಹೇಂದ್ರನ ಪರಾಕ್ರಮವನ್ನೇ ಬಗ್ಗುಬಡಿದಿರುವ ನಿನಗೆ ಆ ಮನುಷ್ಯನು ಯಾವ ಲೆಕ್ಕ ? ಆದರೆ ಅವಳು ಗಾಬರಿಯಿಂದ ಅಸುವನ್ನೇ ನೀಗಬಹುದು. ಹಾಗಾಗದಂತೆ ಅವಳನ್ನು ಕೈವಶಮಾಡಿಕೊಳ್ಳೋಣ. ಅವಳೇ ಅವನ ಪ್ರಾಣ !

ಸಾರಥಿ—(ಸ್ವಗತ) ಹಾಳು ಹೆಂಗಸರು ಪಾಪಕರ್ಮದಲ್ಲಿ ಪಂಡಿತರನ್ನೂ ಮೀರಿಸುತ್ತಾರೆ.

ರಾವಣ—(ಒಂದು ಕ್ಷಣ ಯೋಚಿಸಿ) ಇವಳು ಹೇಳುವುದು ಸರಿ. ಆ ಸೀತೆಯು—

ರಣದಿ ರಭಸದೆ ಕೊಂದು ರಾಮುನನವಳ ಪಿಡಿಯಲ್ಕೊಡನೆಯೆ
ಅಪರಿಚಿತನಂ ಕಾಣುತೆನ್ನನು ಭರ್ತೃಶೋಕದೆ ಸಾಯಳೆ ;
ಮನುಜ ರಾಮುನ ಕೊಲ್ಲಲೆಂತುಂ ಕೈದುವಿಡಿವುದೆ ರಾವಣಂ ;
ತ್ರಿದಶವಿಜಯದೆ ಕೀರ್ತಿಯೆಲ್ಲೆಡೆ ಪಸರಿಸುತ್ತಿರೆ ತೋಳ್ಗಳಾ ॥೧೭॥

ಸಾರಥಿ—ಆಯುಷ್ಮಾನ್,

ನಡುಗುವ ಮೈಯಿಂ, ಕಣ್ಣೀರಿಳಿಸುತ
ಆಕುಲಮನದಿಂದಶ್ವಗಳು ;
ಸೂರ್ಯಾಶ್ವಂಗಳಿಗಧಿಕಗಳೆನಿಸೆಯು
ಬಾನೊಳಗೆಡಹಿವೆ ನೆವಮಿರದೆ. ॥೧೮॥

ರಾವಣ—ಸಾರಥಿ, ಹೋಗಬೇಕಾಗಿರುವುದು ರಾಮನ ಪರ್ಣಶಾಲೆಗೆ, ಕೈಲಾಸಕ್ಕಲ್ಲ!

ಸಾರಥಿ—ಆಯುಷ್ಮಾನ್, ನನ್ನ ಕರ್ತವ್ಯದಲ್ಲಿ ಲೋಪವಾಗದಂತೆ ನಾನು ಹೇಳಿಯಾಯಿತು. ಮುಂದೆ ಏನೇ ಆದರೂ ನೀವೇ ಹೊಣೆ. ಇದೋ ಸಡಿಲ ಬಿಡುತ್ತೇನೆ—(ಸ್ವಗತ) ಮೊದಲು ಸದಾಚಾರವನ್ನು, ಬಳಿಕ ಕಡಿವಾಣವನ್ನು ! (ಓಡಿಸುವನು. ಎಲ್ಲರೂ ರಥದ ವೇಗವನ್ನು ಗಮನಿಸುವರು)

(ಪ್ರಕಾಶ) ಆಯುಷ್ಮಾನ್, ರಥದ ವೇಗವನ್ನು ನೋಡು—

ನೀರ ಸುರಿಸುತ ಮುಗಿಲ ಮಾಲೆಯು ದೀರ್ಘದೀರ್ಘಮಿದಾಗಿದೆ,
ಚಲನೆ ಸರಪಳಿಗಳಿಯೆ ಗಂಟೆಗಳುಲಿಯು ನಿಂತುದು, ನೀರವ !
ಗಾಳಿ ನಿಶ್ಚಲಗೊಳಿಸೆ ಚಾಮರ ಕಿವಿಯೊಳೊರಿವಂತೆಸೆವುದು
ನೆನೆದ ಜಾಗವು ತಾನೆ ನಿನ್ನೆಡೆಗೈದುವಂದದೆ ಕಾಂಬುದು. ॥೧೯॥

ಶೂರ್ಪಣಖೆ—ಸಾರಥಿ ಹೇಳುವುದು ದಿಟ. ಆರ್ಯ, ರಾಮನ ತಪೋವನಕ್ಕೆ ಬಂದಾಯಿತು.

ರಾವಣ—ನಿನ್ನ ವ್ಯಸನಕ್ಕೆ ಮೂಲನಾದ ರಾಮನ ಪ್ರಾಣಸಮೆಯೆಲ್ಲಿ ?

ಶೂರ್ಪಣಖೆ—ಇದೋ ಇವಳೇ. (ಬೆರಳಿಂದ ತೋರಿಸುವಳು)

ರಾವಣ—(ಸೀತೆಯನ್ನು ನೋಡಿ ವಿಸ್ಮಯದಿಂದ) ಈ ತ್ರಿಲೋಕಸುಂದರಿಯೇ ಸೀತೆ ! ಏನಾಶ್ಚರ್ಯ, ಏನಾಶ್ಚರ್ಯ !

ಕಾರಾಗಾರದೊಳಿಟ್ಟೆನಿಂದ್ರಸತಿಯಂ ಮೇಣಪ್ಸರಾನೀಕಮಂ
ಕೂಡಿಟ್ಟೆಂ ದಶದಿಗ್ಜಯಾವಸರದೊಳ್ ಸುಸ್ತ್ರೀಯರಂ ಯಾನದೊಳ್ ।
ಕಂಡೆಂ ಕಂಪಿಪ ಗೌರಿಯಂ ನೆಗಪಿದಂದಾ ತುಂಗ ಕೈಲಾಸಮಂ
ಈ ರೂಪೆಲ್ಲಿಯುಮಿಲ್ಲದಾಯ್ತು, ಚಿರಕಂ ಕಣ್ಣಾಯ್ತುಹಾ ಸಾರ್ಥಕಂ ॥

(ಆಸೆಯಿಂದ ತುಂಬಿದವನಾಗಿ) ಈಗ—
ರೂಪರಸಾಯನಪಾನದಿನೆನ್ನಯ ಬಗೆಗಾನಂದವನೊಡರಿಸುತೆ
ಎನ್ನೀ ಚಂಚಲ ನಯನ ಪರಂಪರೆಯಾದುದು ಸಫಲವು ಕಡೆಗೊಮ್ಮೆ;
ಈಕೆಯ ಪಲ್ಲವಕೋಮಲತನುವನು ಎಂದಿಗೆ ಬಿಡದಾಲಿಂಗಿಸುತೆ
ವೀರವ್ರಣಾಂಕಿತವಾದೀತೋಳ್ಗಳ ವಿಂಶತಿಯನು ನಾಂ ತಣಿಸುವೆನೋ.

ಶೂರ್ಪಣಖಿ—(ಸ್ವಗತ) ನನ್ನ ಇಷ್ಟ ಫಲಿಸಿತು.

ರಾವಣ—(ಲಕ್ಷ್ಮಣನನ್ನು ನೋಡಿ) ಈ ಇನ್ನೊಬ್ಬನಾರು?

ಮೈಯೊಳು ಕವಚವ ಬೆನ್ನೊಳೆ ದೊಣೆಯನು
ಕೈಯೊಳು ದೃಢತರ ಚಾಪವನು ;
ಪಿಡಿಯುತೆ ಸೀತೆಯ ಪಕ್ಕದೆ ನಿಂತೀ
ಯುವಕನು ಯಾರಿರಬಹುದಿವನು ?—

ಶೂರ್ಪಣಖಿ—(ಕಿವಿಯಲ್ಲಿ) ಹೀಗೆ.

ರಾವಣ— ಅಹಹ ರಾಮನು ಶರದೆ ತಾಟಕೆ
ಯನ್ನು ವಧಿಸಲ್ಕೀತನು
ನಿನ್ನೊಳಸಿಯನ್ನೆಸೆದ ಧೀರನು !
ಓವೊ, ಶೂರರು ಮನುಜರು ! ॥೨೨॥

(ನೇಪಥ್ಯದಲ್ಲಿ ಮರ್ಮರ ಧ್ವನಿ)

(ನೇಪಥ್ಯದಲ್ಲೇ) "ಅಬ್ಬಾ, ಏನು ವೇಗ!"

ಸೀತೆ—ಇನ್ನೂ ಆರ್ಯಪುತ್ರನು ಮೃಗವನ್ನು ಬೆನ್ನಟ್ಟುತ್ತಲೇ ಇರುವನು!

ರಾವಣ—ಈ ದನಿ ಯಾರದು?

ಶೂರ್ಪಣಖಿ—ಆರ್ಯ, ರಾಮನದು!

ರಾವಣ—(ತಿರುಗಿನೋಡಿ) ಇವನೇ ತಾಪಸನಾದ ರಾಮು! (ಮೈಮರೆಯುವನು)

ಸಾರಥಿ—(ಸ್ವಗತ) ಮಾರೀಚನ ಮಾತು ನಿಜ. ರಾಮನೆಂದರೆ—

ವರಪುರುಷರೂಪದಾ ಪರವಿಷ್ಣುವಿವನಲ್ಲ
ಬಾಲೇಂದುಶೇಖರನು ಮೊದಲೆ ಅಲ್ಲ ;
ಆ ಅಯೋಧ್ಯೆಯೊಳುದಿಸಿದ ಔಷಧವೆ ಇವನೆಂಬೆ
ಸಕಲ ರಾಕ್ಷಸಜನರ ನಾಶಕಾಗಿ. ||೨೩||

ರಾವಣ—(ಸಾರಥಿಯನ್ನು ನೋಡಿ) ನಿನ್ನ ಆಕಾರವನ್ನು ನೋಡಿದರೆ ಅಂಜಿದಂತಿದೆ!

ಸಾರಥಿ—ಆಯುಷ್ಮನ್, ನಾನು ಅಂಜಿರುವುದು ನಿಜ. ಈಗ ನಾವು ಮನುಷ್ಯರು, ರಾಮನು ರಾಕ್ಷಸ, ಎನ್ನುವಂತಾಗಿದೆ.

ಶೂರ್ಪಣಖೆ—ಆರ್ಯ, ಇವಳ ಆಕೃತಿಯು ತಳತಳಿಸುವ ಆಭರಣದಿಂದ ಎಷ್ಟೊಂದು ಶೋಭಿಸುತ್ತಿದೆ!

ರಾವಣ—ಇವಳಿಗೆ ಆಭರಣಗಳಿಂದೇನು? ನೋಡು—

ಜನ್ಮದೆ ಸುಂದರವೆನಿಸುವ ವಸ್ತುಗೆ
ಒಡವೆಯಪೇಕ್ಷೆಯೆ ಇರದಲ್ತೆ ;
ಚಂದ್ರನ ಕಳೆಯನು ಬೆಳಗುವದಾವುದು?
ಕೆಂಪನು ಕೌಸ್ತುಭಕೀಯುವರೆ? ||೨೪||

ಸಾರಥಿ—ಆಯುಷ್ಮನ್, ಒಂದು ಮಾತನ್ನು ಹೇಳಬೇಕೆಂದಿದ್ದೇನೆ.

ರಾವಣ—ಹೇಳು, ಹಿಂಜರಿಯುವುದೇಕೆ?

ಸಾರಥಿ— ಗಂಭೀರಚಾರಿತ್ರ್ಯಯೆನಿಸುವಳು ಈಕೆ
ಪತಿಯನೇ ಪರದೈವವೆಂದು ತಿಳಿದಾಕೆ ;—

ರಾವಣ—ನಿನಗೆ ಹೇಗೆ ಗೊತ್ತು?

ಸಾರಥಿ— ಪತಿಯೊಡನೆ ಸೊಗವಡೆವಳೀ ಬನದೆ ಧೀರೆ
ಬಂಧುಬಳಗವನೆಲ್ಲ ಮರೆಯುತಲಿ ಸೀರೆ! ||೨೫||

ರಾವಣ—ಅಯ್ಯೋ ಮೂರ್ಖ, ಹೆಂಗಸರಿಗೆ ಹೆಚ್ಚಿನದು ಸಿಕ್ಕಿದರೆ ಸಾಕು, ಹರ್ಷದಿಂದುಬ್ಬುವುದು ಸ್ವಭಾವ. ನೋಡು....

ಮರಕತಮಯವನಹ ಮಂದಾಕಿನಿಯಾ ದಡದೊಳಗೆನ್ನಯ ತೊಡೆಯೇರಿ
ಚಿನ್ನದ ಕಮಲದ ಗಂಧವ ತೀಡುವ ಸ್ವರ್ಗಾನಿಲಗಳ ಸೇವಿಸುತೆ ;

ಅಂಜುವ ಶಕ್ರಾಂಗನೆಯರ ಮೇಲೆಯೆ ಬೀರುತೆ ಕಡೆಗಣ್ ನೋಟಗಳ
ಮನುಜನ ತೊರೆದೀ ವಧುವೆನ್ನೊಡನೆಯೆ ರಮಿಪಳು ಮುದದಲಿ
ಮನದಣಿಯೆ ||೨೬||

ಸೀತೆ—(ದುಶ್ಶಕುನವನ್ನು ಕಂಡು) ಕುಮಾರ, ಏನೋ ಅಶುಭ ಕಾದಿರುವಂತಿದೆ. ನನ್ನ ಬಲಗಣ್ಣು ಹಾರುತ್ತಿದೆ.

ಲಕ್ಷ್ಮಣ—ಆರ್ಯೆ,

ಜ್ಞಾತಿಗಳು ಪಾಲ್ಗೊಂಬ ವಸ್ತುವೊಂದೂ ಇರದೆ
ಕಾಡಿನೆಡೆಗೈದಿರುವ ನಮಗೆ ಇನ್ನು
ಅಶುಭವೆಂಬುದೆ ಮತ್ತೆ ಅರ್ಥವಿಲ್ಲದ ನುಡಿಯು
ಸಿರಿಯೆತ್ತಲಿರುವುದೋ ಪಗೆಗಳತ್ತ! ||೨೭||

ಸೀತೆ—ಕುಮಾರ, ಋಷಿಪತ್ನಿಯರ ಬಾಯಿಂದ ಕೇಳಿದ್ದೆ—ಇಪ್ಪತ್ತು ತೋಳುಳ್ಳ ವಿಖ್ಯಾತನೊಬ್ಬನಿರುವನಂತೆ. ನೀವು ಕೊಂದ ಖರದೂಷಣರಿಗೆ ಅವನು ಅಣ್ಣನಾಗಬೇಕಂತೆ.

ರಾವಣ—ಅದೃಷ್ಟವೇ ಸರಿ. ನನ್ನನ್ನು ಇವಳು ಮೊದಲೇ ಕೇಳಿ ಬಲ್ಲಳು!

ಲಕ್ಷ್ಮಣ—ಆರ್ಯೆ, ಉದ್ವಿಗ್ನಳಾಗಬೇಡ.

ರಾವಣ—ಏನು ಹೇಳುವನೋ ಕಾಣೆ!

ಲಕ್ಷ್ಮಣ—ಪರಾಕ್ರಮಕ್ಕೆ ತೋಳುಗಳೇ ಪ್ರಮಾಣವಲ್ಲ. ನೋಡು—

ಈ ರಾವಣನಂ ಗೆಲ್ದಾ ಸಾಸಿರ-
ತೋಳ್ಗಳ ಅರ್ಜುನನಂ ಮುನಿಯು
ಸಮಿಧೆಯ ಸೀಳುವ ಕೊಡಲಿಯ ಹತಿಯಿಂ
ಸೀಳಿದನಲ್ಲವೆ ಮರವೆನಲು? ||೨೮||

ರಾವಣ—ಎಲಾ ಮನುಷ್ಯ, ನಿನ್ನ ಈ ಮಾತನ್ನು ನೆನಪಿಡು.

(ನೇಪಥ್ಯದಲ್ಲಿ—'ಹಾ! ಲಕ್ಷ್ಮಣಾ!')

ಸೀತೆ—ಅಯ್ಯೋ, ಆರ್ಯಪುತ್ರನ ದನಿಯಂತಿದೆ!

ಲಕ್ಷ್ಮಣ—ಆರ್ಯೆ, ಆರ್ತಧ್ವನಿಯನ್ನು ಆರ್ಯನು ಮಾಡುವುದುಂಟೆ?

ಸೀತೆ—ಹಾಗಾದರೆ ನಿನಗೆ ಏನೆನಿಸುತ್ತದೆ?

ಲಕ್ಷ್ಮಣ—ಮಾಯೆ, ಎಂದು.

ರಾವಣ—ಅಬ್ಬಾ, ಚೆನ್ನಾಗಿ ನುರಿತವನೇ ಇವನು !
ಸೀತೆ—ಮೂರ್ಖ, ಹಾಗಾದರೂ ಅವನನ್ನು ರಕ್ಷಿಸಲೇಬೇಕಲ್ಲವೆ ?
ಲಕ್ಷ್ಮಣ—ರಕ್ಷ್ಯನಾದವನು ರಕ್ಷಿಸುವುದೆಂತು ?

(ನೇಪಥ್ಯದಲ್ಲಿ—'ಇದೇಕೆ ತಡಮಾಡುವೆ ?')

ಸೀತೆ—ಖಳ, ಆಪತ್ಕಾಲದಲ್ಲಿ ಕೂಗುತ್ತಿರುವ ಅಣ್ಣನನ್ನು ಉಪೇಕ್ಷಿಸುವೆಯಾ ? ನಿನ್ನನ್ನು ಭೂಮಾತೆಯಾದರೂ ಹೇಗೆ ಸಹಿಸುತ್ತಿರುವಳು ?
ಲಕ್ಷ್ಮಣ—ಆರ್ಯೆ, ಅದು ನಿಜವೆಂದೇ ನಿರ್ಧರಿಸಿರುವೆಯೇನು ?

(ನೇಪಥ್ಯದಲ್ಲಿ—'ಲಕ್ಷ್ಮಣಾ, ಕೇಳಿಸುವುದಿಲ್ಲವೆ ?')

ಸೀತೆ—ಲಕ್ಷ್ಮಣ, ಕೇಳಿದೆಯಾ ? ಏಕೆ ತ್ವರೆಮಾಡುವುದಿಲ್ಲ ? ಸ್ತ್ರೀಯರಲ್ಲಿ ಲಕ್ಷ್ಮಿಯೊಬ್ಬಳೇ ಮತ್ತೊಬ್ಬನನ್ನು ಸೇರುವವಳು. ಖಂಡಿತ ನಾನಲ್ಲ. ಅವನೊಬ್ಬನನ್ನೇ ಹಿಂಬಾಲಿಸುವೆನು.
ಲಕ್ಷ್ಮಣ—(ಕಿವಿ ಮುಚ್ಚಿಕೊಂಡು) ಶಾಂತಂ ಪಾಪಂ. ಶಾಂತಂ ಪಾಪಂ.

ನನ್ನನೆ ಬಯ್ಯುವೆ ಯೋಚನೆಗೈಯದೆ
ತಿಳಿದವಳಾಗಿಯು ಚಳಿಯಂತೆ ;
ನಿನಗಿದೊ ಬಂದುದು ಕೇಡಿನ ಕಾಲವು
ನಿಜಗುಣವಳಿವುದು ಕೇಡಿನೊಳು ||೨೯||

ರಾವಣ—ಮೂಢ, ವನವಾಸದಿಂದ ನೊಂದವಳಿಗೆ ಸಂಪತ್ತು ಒದಗುತ್ತಿದೆ ಯೆಂಬುದನ್ನು ನೀನರಿಯೆ.

(ನೇಪಥ್ಯದಲ್ಲಿ—'ಹಾ, ಹತನಾದೆ')

ಸೀತೆ—ಮೂರ್ಖ, ಲಕ್ಷ್ಮಣ, ಕೇಳು—ನಿನ್ನ ಎದುರಿಗೇ ನಾನು ಸಾಯುವೆನು. ಆಮೇಲೆ ನಿರಾಶನಾಗಿ ಅಣ್ಣನ ಬಳಿಗೆ ಹೋಗುವೆಯಂತೆ !
ಲಕ್ಷ್ಮಣ— ಅವಿವೇಕದಶುಭವನು ಅಕರುಣಾನೂರ್ಜಿತವ-
ನಿಂತೊರೆಯಲೆನಗಿಂದು ಪೆಣ್ಜನ್ಮ ಸುಡಲಿ ! ||೩೦||

ಸೀತೆ—ನೀನು ಸಾಧುಶಿರೋಮಣಿಯಾಗಿಯೇ ಇರು !
ಲಕ್ಷ್ಮಣ— ನನವೈರ ಮೊಳೆತಿರುವ ಮಾಯಾವಿ ರಕ್ಕಸರ
ಬೀಡೆನಿಪ ಬನದೊಳಗೆ ನಿನ್ನನೆಂತು ;
ಮತಿವಿಕಲೆಯೊಬ್ಬಳನೆ ಬಿಟ್ಟು ಪೋಪೆನೊ ಕಾಣೆ
ಪಿರಿಯಣ್ಣನಾಜ್ಞೆಯನೆ ಮೀರುತ್ತಲಿಂತು. ||೩೧||

ಸೀತೆ—ಸ್ತ್ರೀಯರನ್ನು ಪಾತಿವ್ರತ್ಯ ರಕ್ಷಿಸುತ್ತದೆ, ಬಾಣಗಳಲ್ಲ !

ಲಕ್ಷ್ಮಣ—ದೇವತೆಗಳೇ ಇದಕ್ಕೆ ಸಾಕ್ಷಿ !

ಸೀತೆ—ಆಗಬಹುದು !

ಲಕ್ಷ್ಮಣ—(ನಮಸ್ಕರಿಸಿ) ನಿನಗೆ ನಮಸ್ಕಾರ ! (ನಿಷ್ಕ್ರಮ)

ಶೂರ್ಪಣಖಿ—ಆರ್ಯ, ನೋಡು, ನೋಡು.

ಸೀತೆ—ಲಕ್ಷ್ಮಣನು ಬೇಗ ಆರ್ಯಪುತ್ರನ ಬಳಿ ಸೇರಿಯಾನೆ !

(ನೇಪಥ್ಯದಲ್ಲಿ—'ಹಾ, ಸೀತೇ, ನೀನೂ ನನ್ನನ್ನು ಉಪೇಕ್ಷಿಸುವೆಯಾ ! ')

ಸೀತೆ—ಅಯ್ಯೋ, ನಾನೆಂತಹ ಅಧನ್ಯೆ ! ಆರ್ಯಪುತ್ರನನ್ನು ದನಿಹಿಡಿದು ಹುಡುಕುವಂತಾದೆನೆ !

ಶೂರ್ಪಣಖಿ—ಆರ್ಯ, ನೋಡು, ನೋಡು. ರಕ್ಷಕರಿಲ್ಲದ ರತ್ನವು ತಾನೇ ಹೊರಗೆ ಹೊರಟಿರುವುದು !

ರಾವಣ—ಇದು ಉಪೇಕ್ಷೆ ಮಾಡುವ ಸಮಯವಲ್ಲ. ರಾಮನ ರೂಪಿನಿಂದ ಇವಳನ್ನು ಅರ್ಧದಲ್ಲೇ ತಡೆಯುವೆನು.

ಶೂರ್ಪಣಖಿ—ಆರ್ಯನು ಹೇಳುವುದು ಸರಿ. ನಾನೂ ಕೂಡ ಸೀತೆಯ ರೂಪದಲ್ಲಿ ಹೋಗಿ ಹಿಂದಿರುಗುತ್ತಿರುವ ರಾಮನಿಗೆ ವಿಳಂಬವಾಗುವಂತೆ ಮಾಡುತ್ತೇನೆ !

ರಾವಣ—ಆಗಲಿ.

ಶೂರ್ಪಣಖಿ—ಇದಕ್ಕಿಂತ ಹೆಚ್ಚಾಗಿ ನಾನೇನು ಮಾಡಲಿ ! (ನಿಷ್ಕ್ರಮ)

ಸಾರಥಿ—ಆಯುಷ್ಮಾನ್, ಈಗ ನಾನೇನು ಮಾಡಬೇಕು ?

ರಾವಣ—(ಕಿವಿಯಲ್ಲಿ) ಹೀಗೆ !

ಸಾರಥಿ—ಆಯುಷ್ಮಂತನ ಅಪ್ಪಣೆ. (ಸ್ವಗತ) ಅಯ್ಯೋ, ಧಣಿಯ ಪಿಂಡವೆಂಬುದು ಹೆಚ್ಚಿನದು ! ಇದನ್ನೂ ನಾನು ಮಾಡಬೇಕಾಯಿತೆ !

(ರಾವಣನು ರಥದಿಂದಿಳಿದು ರಾಮನ ವೇಷದಲ್ಲಿ ಸೀತೆಯ ಮುಂದೆ ನಿಲ್ಲುವನು)

ಸೀತೆ—ಹೋ, ಆರ್ಯಪುತ್ರನೇ ! ಆರ್ಯಪುತ್ರನಿಗೆ ಜಯವಾಗಲಿ.

ರಾವಣ—ದೇವಿ, ಇತ್ತ ಬಾ.

ಮಾಯಾಬಲದಿಂ ಬಲಯುತರಾಗಿಹ
ದನುಜರ ನಾಲಗೆಯಡಿಯೊಳಗೆ,

ನಿನ್ನನು ಬಿಟ್ಟನೆ ಲಕ್ಷ್ಮಣನಿಲ್ಲಿಗೆ
ಬಂದೆಯದೆಂತಾ ಮೆಲ್ಲಡಿಯಿಂ ? ||೩೨||

ಸೀತೆ—ಅಹಾ, ನಾನು ತಿಳಿಯದೆ ಕುಮಾರನನ್ನು ನಿಂದಿಸಿದೆ. ಇನ್ನು ಅವನೇನೆನ್ನುವನೋ !

ರಾವಣ—ಮಾಯಾಮೃಗದ ದನಿಯಿಂದ ನೀನು ಮೋಸಹೋಗಿರಬೇಕು.

ಸೀತೆ—ಆರ್ಯಪುತ್ರ, ಆ ಮಾಯಾಮೃಗವೆಲ್ಲಿ ?

ರಾವಣ—ದಾರಿಯಲ್ಲೇ ಅದೃಶ್ಯವಾಯಿತು. ತಾನೇ ಇನ್ನೊಮ್ಮೆ ಬರುವುದು !

(ನೇಪಥ್ಯದಲ್ಲಿ—'ಇದೋ, ಬಂದೆ, ಬಂದೆ.')

ಸೀತೆ—ಹೋ, ಆರ್ಯಪುತ್ರನ ದನಿಯಂತಿದೆ !

ರಾವಣ—ಮೊದಲೂ ಹೀಗೆಯೇ ದನಿಯ ಸಾಮ್ಯದಿಂದ ಮೋಸಹೋಗಿರುವೆ.

ಸೀತೆ—ಅದರಿಂದಲೇ ಕುಮಾರನನ್ನೂ ನಾನು ನಿಂದಿಸಿಬಿಟ್ಟುದು.

(ರಾವಣನು ಸಾರಥಿಯನ್ನು ನೋಡುವನು. ಸೂತನು ಲಕ್ಷ್ಮಣನ ವೇಷದಲ್ಲಿ ಸಂಶಯ ಬಾರದಂತೆ ರಥವನ್ನು ರಾವಣನ ಬಳಿಗೆ ತರುವನು.)

ಸಾರಥಿ—ಆರ್ಯನು ಪ್ರಸನ್ನನಾಗಲಿ. ಪತ್ನಿಯೊಡನೆ ರಥವನ್ನೇರೋಣವಾಗಲಿ !

ರಾವಣ—ಲಕ್ಷ್ಮಣ, ಇದೇನು ?

ಸಾರಥಿ—ಆರ್ಯ, ಯೋಗಚಕ್ಷುಸ್ಸಿನಿಂದ ತಪಸ್ವಿಗಳು ಭರತನಿಗೆ ಶತ್ರುಯುದ್ಧ ಬಂದಿತೆಂಬುದನ್ನು ಕಂಡರು. ನಾವಿಬ್ಬರೂ ಬೇಗ ಅವನ ಸಹಾಯಕ್ಕೆ ಹೋಗಬೇಕೆಂದು ತಮ್ಮ ತಪೋಬಲದಿಂದ ಈ ರಥವನ್ನು ನಿರ್ಮಿಸಿ ನನ್ನೊಡನೆ ಕಳುಹಿಸಿ ಕಾಡೊಳಗೆ ಅದೃಶ್ಯವಾದರು.

ಸೀತೆ—(ಸ್ವಗತ) ಇರಬಹುದು. ಹಿಂದೆಯೂ ಇವನ ಕೈಯಲ್ಲೇ ಅವರು ಆಶ್ಚರ್ಯಚೂಡಾಮಣಿಯನ್ನೂ ಅದ್ಭುತ ಉಂಗುರವನ್ನೂ ಕಳುಹಿಸಿ ಕೊಟ್ಟಿದ್ದರು.

ರಾವಣ—ನಿನ್ನ ಅಭಿಪ್ರಾಯವೇನು ?

ಸೀತೆ—ಭರತನ ದುಃಖ ಪರಿಹಾರವಾಗುವುದೂ ಗುರುಜನರನ್ನು ವಂದಿಸುವುದೂ ನನಗೆ ಇಷ್ಟವೇ.

ರಾವಣ—ಲಕ್ಷ್ಮಣ, ದೇವಿಯನ್ನು ಮೊದಲು ರಥದಲ್ಲಿ ಕುಳ್ಳಿರಿಸು.

ಸಾರಥಿ—ಆರ್ಯನ ಅಪ್ಪಣೆ. (ರಥಕ್ಕೆ ಹತ್ತಿಸುವನು)

ಸೀತೆ—ರಾಕ್ಷಸರ ಮೋಸದಿಂದ ಬಿಡುಗಡೆಯಾದುದು ನಮ್ಮ ಅದೃಷ್ಟ. ಇನ್ನು ಹೋಗೋಣ !

(ಸೀತೆಯು ಸಂತೋಷದಿಂದ ರಥವನ್ನು ಹತ್ತುವಳು, ರಾವಣನೂ ಸಾರಥಿಯೂ ಹಾಗೆಯೇ ಹತ್ತುವರು.)

ರಾವಣ—ದೇವಿಯು ಪ್ರಸನ್ನಳಾಗಿರುವಳು. ಲಕ್ಷ್ಮಣ, ಬೇಗ ಕುದುರೆಗಳನ್ನೋಡಿಸು !

ಸಾರಥಿ—ಆರ್ಯನ ಅಪ್ಪಣೆ !

ರಾವಣ—(ಸ್ವಗತ) ರಾಮನೇ ನಾನೆಂದು—

ಮತಿಯೊಳಿನಿತೂ ಶಂಕೆಯಿಲ್ಲದ
ಇವಳ ಸೋಂಕಲ್ಕಾರೆನು ;
ಮೊಟ್ಟಮೊದಲಿಗೆ ಕಂಡ ಪೆಂಡಿರ
ಕೂಟವೆಂಬುದು ಕಷ್ಟವು ||೩೩||

(ರಾಮ, ಸೀತೆಯ ವೇಷದಲ್ಲಿರುವ ಶೂರ್ಪಣಖಿ, ಇವರ ಪ್ರವೇಶ)

ರಾಮ—ದೇವಿ, ಆ ವಂಚಕನಾದ ರಾಕ್ಷಸನು ನನ್ನ ಬಾಣ ಸೋಂಕುವಾಗಲೇ ನನ್ನ ರೂಪನ್ನು ತಾಳಿ ಕೆಳಗುರುಳಿದನು. ಆದ್ದರಿಂದ ಅವನನ್ನು ಕಡೆಗಣಿಸಿ, ನಿನ್ನ ಸುದ್ದಿಯನ್ನರಿಯಲು ಬೇಗ ಹಿಂದಿರುಗಿದ್ದೇನೆ.

ಶೂರ್ಪಣಖಿ—(ಸ್ವಗತ) ನಿನ್ನ ದೇವಿಯು ಹಾಳಾದಳು !

ರಾಮ—ದೇವಿ, ನನಗಾಗಿ ನೀನು ರೂಪಾಂತರವನ್ನೇ ಪಡೆದಿರುವೆ !

ಶೂರ್ಪಣಖಿ—ಇದು ನಿಜ.

ಆಕಾಶದಲ್ಲಿ (ರಥಸ್ಥೆಯಾದ) ಸೀತೆ—ಚಿರಕಾಲ ಸಖಿಯಾಗಿದ್ದ ವನಲಕ್ಷ್ಮಿಯನ್ನು ಅಗಲಿ ಹೋಗಬೇಕಾಗಿದೆ !

ರಾವಣ—ದೇವಿ, ಈ ಚಿಂತೆಯನ್ನು ಬಿಡು. ನಂದನವನ್ನೇ ಮೀರಿಸಿರುವ ನಗರೋದ್ಯಾನದ ಸಿರಿಯನ್ನು ನೋಡುವೆಯಂತೆ !

ಸೀತೆ—ಆಗಲಿ. (ಕೆಳಗೆ ನೋಡಿ) ಓ, ಆರ್ಯಪುತ್ರ !

ರಾಮ—ಆಕಾಶದಲ್ಲಿ ಸೀತೆಯ ದನಿಯಾದಂತಿದೆ ! (ಮೇಲೆ ನೋಡುವನು)

ಶೂರ್ಪಣಖಿ—ಆರ್ಯಪುತ್ರ, ನೋಡು, ನೋಡು. ನಿನ್ನ ಆಕೃತಿಯಂತಿರುವವನನ್ನೂ ನನ್ನ ಆಕಾರದವಳನ್ನೂ ಕನ್ನಡಿಯಲ್ಲಿ ಕಾಣುವಂತೆ ಕಾಣುತ್ತಿದ್ದೇನೆ.

ರಾಮ—ನಿಜವಾಗಿಯೂ ಸೀತೆ ಪರಪುರುಷರ ಪಕ್ಕದಲ್ಲಿ ನಿಲ್ಲಳು. ಇವಳು ಮಾಯಾರಾಮನ ಪಕ್ಕದಲ್ಲಿರುವ ಮಾಯಾಸೀತೆಯೇ ಇರಬೇಕು. ನಾನು ಹೇಗೆ ಅವನಲ್ಲವೋ ಹಾಗೆಯೇ ಅವಳು ನಿಜವಾದ ಸೀತೆಯೂ ಆಗಿರಲಾರಳು.

ಸೀತೆ—ಅಯ್ಯೋ, ಕೆಟ್ಟೆನು. ನಿಜವಾದ ಆರ್ಯಪುತ್ರನಾರೆಂದು ಕಾಣೆನೇ !

ರಾವಣ—ಮುಗ್ಧೆ, ಮುನಿಗಳನ್ನು ವಂಚಿಸುವುದಕ್ಕಾಗಿ ನನ್ನ ವೇಷದಲ್ಲಿ ರಾಕ್ಷಸರು ತಿರುಗುತ್ತಾರೆ !

ಸೀತೆ—ನಿಜವಿರಬೇಕು. ಆರ್ಯಪುತ್ರನಿಗೆ ಪರಸ್ತ್ರೀಯೊಡನೆ ಸಂಪರ್ಕವೆಲ್ಲಿ ಯದು ! ನಾನು ಹೇಗೆ ಆಕೆಯಲ್ಲವೋ ಹಾಗೆಯೇ ಅವನು ಆರ್ಯ ಪುತ್ರನೂ ಆಗಿರಲಾರನು.

ರಾವಣ—ದೇವಿಯು ಪ್ರಸನ್ನಳಾಗಿರುವಳು. ಲಕ್ಷ್ಮಣ, ಬೇಗ ಕುದುರೆ ಗಳನ್ನೋಡಿಸು.

ಸಾರಥಿ—ಆರ್ಯನ ಅಪ್ಪಣೆ.

(ಸೀತೆಯೊಡನೆ ರಾವಣ, ಸಾರಥಿಗಳ ನಿಷ್ಕ್ರಮ)

ಶೂರ್ಪಣಖೆ—(ವಿಷಾದದಿಂದ, ಸ್ವಗತ) ಈಗ ನಾನು ಹೋಗಲು ಉಪಾಯ ವೇನು ?

ರಾಮ—ದೇವಿ—

ದಾಸವಾಳದ ಕೆಂಪನಾಂತ ಚೆಂದುಟಿಯನ್ನು
ನಿಟ್ಟುಸಿರಿನಿಂದೇಕೆ ನೋಯಿಸುತಿಹೆ ?
ಎಡೆಬಿಡದೆ ನಯನದಿಂ ಕಂಬನಿಯ ಸುರಿಸುತ್ತೆ
ಕುಚಗಳನು ನೀನೇಕೆ ನೆನೆಯಿಸುತಿಹೆ ?
ವಿವಶಳಾದವಳಂತೆ ಅಡಿಗಡಿಗೆ ಶೋಕಿಸುತೆ
ಚಿಂತಿಸುತೆ ಮಾನವನು ತಳೆವೆಯೇಕೆ ?
ನಾನು ಪೊರಮಡಲೆನ್ನ ಸಂಗಡವೆ ನಿನ್ನಯಾ
ಧೈರ್ಯವೂ ಪೊರಮಟ್ಟುದೇನು, ಕಾಂತೆ ? ॥೩೪॥

ಶೂರ್ಪಣಖೆ—ಆರ್ಯಪುತ್ರ, ನಿನ್ನ ವ್ಯಸನಕ್ಕೆ ನಾನೇ ಬೀಜವಾದೆನಲ್ಲವೆ ?

ರಾಮ—ಹಾಗಲ್ಲ. ಮಾಯಾಮೃಗಕ್ಕೆ ಬೆರಗಾಗದವರು ಯಾರು? ಲಕ್ಷ್ಮಣ ನೇಕೆ ಇನ್ನೂ ಬರಲಿಲ್ಲ?

ಶೂರ್ಪಣಖೆ—ನಾನೂ ಅದನ್ನೇ ಯೋಚಿಸುತ್ತಿರುವೆನು.

ರಾಮ—ಅವನು ರೂಪವನ್ನು ಬದಲಾಯಿಸಿದ ಕಾರಣ, ಲಕ್ಷ್ಮಣನು ಮೋಸ ಹೋಗಿರಬಹುದು. ಆದ್ದರಿಂದ, ದೇವಿ, ನೀನು ನನ್ನ ಹಿಂದೆ ಬರಲು ಶಕ್ತಳಾದರೆ ನಾನು ಲಕ್ಷ್ಮಣನನ್ನು ಹುಡುಕುವೆನು.

ಶೂರ್ಪಣಖೆ—ಹೇಗಾದರೂ ಹಿಂಬಾಲಿಸುವೆನು. ರಾಕ್ಷಸರ ವಂಚನೆಯಿಂದ ನನಗೂ ಭಯವಾಗಿದೆ.

ರಾಮ—ದೇವಿ, ಇತ್ತ ಬಾ. (ಇಬ್ಬರೂ ನಡೆಯುವರು)

(ನೇಪಥ್ಯದಲ್ಲಿ)

"ಕೈಕೆಯೀ ! ತೃಪ್ತಿವಡೆ ನೀನು
ಕೌಸಲ್ಯೆ ! ಗತಿಯಿಲ್ಲ ನಿನಗೆ ;
ರಾಕ್ಷಸನ ಶರದಿಂದೆ ಹೀಗೆ
ನಿನ್ನಣುಗ ಮರ್ಮಹತನಾಗೆ." ||೩೫||

ರಾಮ—ಅಯ್ಯೋ, ಹಾಗೆಯೇ ಆಯಿತು !

(ಮತ್ತೆ ನೇಪಥ್ಯದಲ್ಲಿ)

"ಸತ್ಯವಾದಿನಿ ! ಧರ್ಮಶೀಲೆಯೆ !
ಭೂಮಿತಾಯಿಯ ಪುತ್ರಿಯೆ !
ಎಣಿಸಲಾದುದೆ ದೇವಿ ನಿನ್ನನು
ಅಶುಭನಾರಿಯರೆಡೆಯೊಳು !" ||೩೬||

ರಾಮ—ಇವನು ಪ್ರಾಣತ್ಯಾಗ ಮಾಡುವ ಮೊದಲೇ ಇವನನ್ನು ಸಮಾಪಿಸುವೆನು.

(ಬಾಣವನ್ನೆಳೆಯುತ್ತಿರುವ ಲಕ್ಷ್ಮಣ ಮತ್ತು ರಾಮನ ವೇಷದಲ್ಲಿರುವ ಮಾರೀಚರ ಪ್ರವೇಶ)

ಲಕ್ಷ್ಮಣ—(ಶೋಕಿಸುತ್ತಾ) ಆರ್ಯ, ಗುರುವಿಧೇಯ, ನಿನಗಧೀನವಾದ ನನ್ನ ಜೀವವನ್ನೂ ಒಯ್ಯುವೆ !

ರಾಮ—(ನಗುತ್ತಾ) ಲಕ್ಷ್ಮಣ—

ಮಾಯಾವಶದಿಂ ಬಂದೀ ದುಃಖವ
ಬಿಡು, ನೋಡೆನ್ನನು ಪೂರ್ವಜನ ;

ಲಕ್ಷ್ಮಣ—(ನೋಡಿ, ಕೋಪಿಸುತ್ತಾ) ಎಲಾ, ರಾಕ್ಷಸ,

ಪೂರ್ವಜನನುವಂ ಕೊಳ್ಳುತೆ ಬಳಿಕಂ
ನನ್ನೆಡೆಗೀಗೈತಂದಿಹೆಯಾ ? ||೩೭||

ನಿಲ್ಲು, ನಿಲ್ಲು ! ಎಲ್ಲಿ ಹೋಗುವೆ ? (ಕತ್ತಿಯನ್ನು ಹಿರಿಯುವನು)

ರಾಮ—(ಸಮೀಪಿಸಿ) ಲಕ್ಷ್ಮಣ, ನೋಡು, ನೋಡು. (ಎಂದು ಉಂಗುರವನ್ನು ತೋರಿಸುವನು)

ಲಕ್ಷ್ಮಣ—(ನೋಡಿ, ಲಜ್ಜೆಯಿಂದ, ಸ್ವಗತ) ಇದನ್ನು ರಾಕ್ಷಸರರಿಯರು.
(ತಲೆ ತಗ್ಗಿಸಿಕೊಳ್ಳುವನು)

ರಾಮ—ಲಕ್ಷ್ಮಣ, ಉಂಗುರದ ಪ್ರಭಾವವನ್ನು ನೋಡು.
(ಮಾರೀಚನನ್ನು ಕಾಲಿಂದ ಒದೆಯುವನು. ಮಾರೀಚನು ನಿಜರೂಪವನ್ನೇ ತಳೆಯುವನು.)

ಲಕ್ಷ್ಮಣ—ಆರ್ಯ, ನೋಡುತ್ತಿದ್ದೇನೆ—

ತಾವರೆಯ ಕೆಂಪೆಸೆವ ನಿನ್ನಡಿಯಿನೊದೆದೊಡನೆ
ತನ್ನ ನಿಜರೂಪವನೆ ತಳೆಯುತಿವನು,
ಮುಗಿಲೊಡನೆ ಬಾನಿಂದೆ ರಭಸದಲಿ ಕೆಡೆದಿಹನು
ಬುವಿಯೊಳದ್ರಿಗಳೆಲ್ಲ ಪುಡಿಯಾಗಲು ||೩೮||

ಶೂರ್ಪಣಖಿ—(ಶೋಕದಿಂದ, ಸ್ವಗತ) ಅಹಾ, ಮನುಷ್ಯರೇ ಬಲಾಧಿಕರಾದರು ! ಅಯ್ಯೋ, ಗುರುವಾದ ಮಾರೀಚನು ಹತನಾದನೇ ! (ಅಳುವಳು)

ಲಕ್ಷ್ಮಣ—ಇದನ್ನು ನೋಡಿದ್ದರಿಂದ ಉಂಗುರದ ಬೆಲೆ ಪ್ರಮಾಣಿತವಾದಂತಾಯಿತು. ರಾಕ್ಷಸರೋ ಎಂಬ ಸಂದೇಹ ಬಂದಾಗ ನಿಜವನ್ನು ಅದು ತಿಳಿಸಿಕೊಡಬಲ್ಲದು.

ಶೂರ್ಪಣಖಿ—ನನಗೆ ತಪ್ಪಿಸಿಕೊಳ್ಳಲು ಉಪಾಯವೇನು ? (ವಿಷಾದಿಸುವಳು)

ರಾಮ—ದೇವಿ, ಇನ್ನೂ ನೀನು ಶೋಕವನ್ನು ಬಿಡುವುದಿಲ್ಲವೆ ?
(ಎಂದು ಕಣ್ಣೀರನ್ನೊರೆಸುವನು. ಶೂರ್ಪಣಖಿಗೆ ನಿಜರೂಪ ಬರುವುದು.)

ಶೂರ್ಪಣಖೆ—ಈಗ ನಾನು ಮುಗಿದೆ !

ರಾಮ—ಲಕ್ಷ್ಮಣ, ಇದೇನು ?

ಲಕ್ಷ್ಮಣ—ಆರ್ಯ, ನೋಡು—

ನೀಲೋತ್ಪಲಾಕೃತಿಯು ಪೋಗಿ ರಥಚಕ್ರಗಳ
ರೂಪು ಬರುತಿಹುದಿಲ್ಲಿ ಕಣ್ಣೆರಡಕೆ ;
ಮೂಗಿಲ್ಲದೀ ವದನ ದಂತಮೂಲವ ತೋರೆ
ಬಿಸವೆಸೆವ ನಿರ್ಮಥಿತ ನದಿವೊಲಿಹುದು ||೩೯||

ಎಲಾ, ಈ ಗೋಳೆಲ್ಲ ನಿನ್ನಿಂದಲೇ ಆಯಿತು !

(ಕತ್ತಿಯನ್ನು ಹಿರಿಯುವನು)

ಶೂರ್ಪಣಖೆ—(ಅಂಜುತ್ತಾ) ಆರ್ಯ, ಶರಣು, ಶರಣು.

ರಾಮ—(ಲಕ್ಷ್ಮಣನನ್ನು ತಡೆದು) ಶೂರ್ಪಣಖೆ, ನಿಜವನ್ನು ಹೇಳಿಬಿಡು. ನಿನಗೆ ಅಭಯವನ್ನಿತ್ತಿರುವೆ !

ಶೂರ್ಪಣಖೆ— (ಆಕೃತಿಯನ್ನು ಮುಚ್ಚಿಕೊಳ್ಳುತ್ತಾ ಕಿವಿಯಲ್ಲಿ) ಆರ್ಯ, ಹೀಗೆ.

ರಾಮ—ಶೂರ್ಪಣಖೆ, ನಿನ್ನನ್ನು ಬಿಡುವುದಕ್ಕೆ ಪ್ರತಿಯಾಗಿ ಈ ಸಂದೇಶವನ್ನು ನಿಮ್ಮಣ್ಣನಿಗೆ ಮುಟ್ಟಿಸು.

ಶೂರ್ಪಣಖೆ—ದಯಾಳುವಾದ ಪ್ರಭು ಆಜ್ಞಾಪಿಸಬೇಕು.

ರಾಮ—ಕೇಳು—

"ಮಾಯಾಸೀತೆಯ ಕಣ್ಣಿಗೆ ಕಾಣಿಸಿ ವಂಚಿಸುತೆನ್ನನು ಮಿಗದಿಂದೆ
ಎನ್ನಯ ವೇಷವ ತಳೆಯುತೆ ಮಾಯಾಲಕ್ಷ್ಮಣನನ್ನೇ ನಿರ್ಮಿಸುತೆ ;
ನಹಿಲದಿನೋಡಿದ ನಿನ್ನಿಂ ಸೀತೆಯು ವಂಚಿತಳಲ್ಲವು ನಿಜದಿಂದೆ
ವಿಧವೆಯರಾಗುವ ನಿನ್ನಯ ಸತಿಯರೆ ವಂಚಿತರಾದರು ತಿಳಿಯಿದನು."
ಎಂದು.

ಲಕ್ಷ್ಮಣ—ಶೂರ್ಪಣಖೆ, ನನ್ನ ಈ ಮಾತನ್ನೂ ಅವನಿಗೆ ಹೇಳು—

"ಬಂಧುಗಳಲ್ಲಿಯೆ ಯಾಚನೆ ಸಲ್ಲದು
ಪಗೆಗಳ ಯಾಚಿಪೆ ನಾನೆಂತು ?

ರಣದೊಳು ರಾವಣ ! ಬಂಧುಗಳೊಡನೆಯೆ
ಚಣ ದರ್ಶನ ಕೊಡು ಮುನಿಗಿವಗೆ ” ||೪೧||

ಶೂರ್ಪಣಖೆ—ನಮ್ಮಣ್ಣನಿಗೆ ಯುದ್ಧವೆಂದರೆ ಉತ್ಸವ !
ಲಕ್ಷ್ಮಣ—ಎಲಾ, ತೊಲಗಾಚೆ !
ಶೂರ್ಪಣಖೆ—ಇದೋ, ನಭಕ್ಕೆ ನೆಗೆದೆ ! (ನಿಷ್ಕ್ರಮ)
ರಾಮ—ಲಕ್ಷ್ಮಣ, ನಾವು ಮೋಸಹೋದೆವು—

‘ ಕನಕಹರಿಣವೆಲ್ಲಿ ಬನವಿದೆಲ್ಲಿ ಎಂದು ನೋಡದೆ
ನಿಶಿತಮತಿಯೆನಿಪ್ಪ ರಾಮ ರಾಮೆಯಾಸೆಗೊಲಿದನು ’ ;
ಎಂದು ಜನರು ನನ್ನ ನಗರೆ, ಗತಕೆ ಚಿಂತೆ ಸಾಕಿದು
ಕುಪಥದಲ್ಲಿ ಮತಿಯು ಪರಿಯದಿರಲನರ್ಥವಪ್ಪುದೆ ? ||೪೨||

ಲಕ್ಷ್ಮಣ—ಆರ್ಯ, ಈಗ ವಿಳಂಬವಿಲ್ಲದೆ ಯತ್ನಿಸಬೇಕು.
ರಾಮ—ಹೌದು. ಹೋಗೋಣ.
ಲಕ್ಷ್ಮಣ—ಆರ್ಯನ ಅಪ್ಪಣೆ. ಇತ್ತ ಬರಬೇಕು.
(ನಿಷ್ಕ್ರಮ—ಇಬ್ಬರೂ)

**ಇಲ್ಲಿಗೆ ಮೂರನೆಯ ಅಂಕ ಮುಗಿದುದು.**

# ನಾಲ್ಕನೆಯ ಅಂಕ

(ರಥದಲ್ಲಿ ರಾವಣ, ಸೀತೆ, ಸಾರಥಿಗಳ ಪ್ರವೇಶ)

ರಾವಣ—ಲಕ್ಷ್ಮಣ, ಕುದುರೆಗಳನ್ನು ಬೇಗ ಓಡಿಸು—

ಧರಣಿಯು ಕುರಿತಾ ಭಾರವ ಮರೆಯಲಿ
ಸೋದರ ಭರತನು ಚಣಕಾಲ,
ನಮ್ಮನು ಕಾಣುತೆ ಮಾತೆಯರಾನಲಿ
ಬಗೆಯೊಳಗುಕ್ಕುವ ಹರುಷವನು,
ನಗರವನೀಗಲೆ ಸೇರುತೆ ವಹಿಲದೆ
ಗಿರಿಬನದೆಡೆಯಲಿ ರಕ್ಕಸರ
ಕಡೆಯಿಂದೊದಗಿದ ಕೋಟಲೆಯೆಲ್ಲವ
ತೊರೆಯಲಿ ಈಕೆಯು ಜಾನಕಿಯು. ॥೧॥

ಸೀತೆ—ಆರ್ಯಪುತ್ರ, ಹಾಗೆನ್ನಬೇಡ. ನನ್ನ ಮನಸ್ಸು ತಪೋವನದಲ್ಲಿಯೇ ಆನಂದಿಸುವುದು.

ಸಾರಥಿ—(ಸ್ವಗತ) ಇವಳ ಮನಸ್ಸು ಶಾಂತ ಮತ್ತು ಉದಾರ. ಇವಳು ವಂಚನೆಗೆ ಅರ್ಹಳಲ್ಲ.

ಸೀತೆ—(ಸ್ವಗತ) ಇದೇನಿದು? ಪ್ರಿಯವಾರ್ತೆಯನ್ನು ಕೇಳುತ್ತಿದ್ದರೂ ಹೃದಯವು ಪರಿತಪಿಸುತ್ತಿರುವುದು!

ರಾವಣ—(ಕಾಮಾವೇಶದಿಂದ) (ಸ್ವಗತ) ಯಾವ ಉಪಾಯದಿಂದ ಈ ಮನುಷ್ಯಸ್ತ್ರೀಯೊಡನೆ ಕಾಮೋತ್ಕಂಠೆಯನ್ನು ತೀರಿಸಿಕೊಳ್ಳಲಿ?

ಸಾರಥಿ—(ರಾವಣನನ್ನು ನೋಡಿ, ಸ್ವಗತ) ಅಬ್ಬಾ, ಕಾಮಕ್ಕೆ ಎಲ್ಲೆಯೆಂಬುದೇ ಇಲ್ಲ. ಅದರಿಂದಲೇ—

ನಿಯಮಶೀಲನ ಸತಿ ಸುಶೀಲೆಯನೀತನಿಂತೀಕ್ಷಿಸುವನು
ಪುಲಕವೇರುವ ಬಾಹುಯುಗಳವನಿಂತು ನೀಡುತ್ತಿರುವನು;
ಬಿಸಿಯ ನಿಡುಸುಯ್ಯಿಂದಲೀತನ ತುಟಿಯ ಬಣ್ಣವೆ ಕಂದಿದೆ
ಏನನೇನನೊ ನೆವಮೆಯಿಲ್ಲದೆ ನುಡಿವನಲ್ಲದೆ ಗೈವನು. ॥೨॥

ಸೀತೆ—(ಸ್ವಗತ) ಆರ್ಯಪುತ್ರನು ಬೇರೊಬ್ಬನಂತೇಕೆ ಕಾಣುತ್ತಿರುವನು?

ರಾವಣ—(ಸ್ವಗತ) ಇರಲಿ. ಮೊದಲು ಇವಳ ಮೈಸೋಂಕಿನ ಸುಖವನ್ನು ಸವಿಯುವೆನು. ಅಹಾ, ಪೂರ್ವಪರಿಚಯವಿಲ್ಲದಿರುವಿಕೆ ಕಷ್ಟಕರ. ಆದುದರಿಂದಲೇ—

ಕರ್ಣಚಾಮರದೆಡೆಯೊಳೊಪ್ಪುತಿರೆ ಮದವಾರಿ
ವಾಸವನ ಪೇರಾನೆಯಾನನದೊಳೆ;
ಅನಿವಾರ್ಯಶೌರ್ಯವನು ಮೆರೆದೆನ್ನ ಕೈಯಿಂದು
ತಾಪಸನ ಮಡದಿಯನು ಸೋಂಕದಾಯ್ತು. ||೩||

ಸೀತೆ—(ಸ್ವಗತ) ರಾಕ್ಷಸದರ್ಶನಕ್ಕೆ ಸಾವಿರಪಟ್ಟು ಹೆಚ್ಚಿನ ಸಂತಾಪ ನನಗಾಗುತ್ತಿರುವುದೇಕೆ?

ರಾವಣ—(ಸ್ವಗತ) ಇರಲಿ. ಹೀಗೆ ಮಾಡುವೆನು. (ಪ್ರಕಾಶ) ದೇವಿ,

ವನಸುಮವಲ್ಲರಿ ಮಂಡನವೆನಿಸಲು,
ನೇಮದ ಮೀಹಕೆ ಬನದೊಳಗೆ
ಸಿಕ್ಕನೆ ರಥವೇಗಕೆ ಬಿಚ್ಚಿರುವೀ
ನಿನ್ನಯ ಮುಡಿಯನು ತಿದ್ದುವೆನು. ||೪||

ಸೀತೆ—(ನಾಚುತ್ತಾ) ಕುಮಾರನು ಇಲ್ಲಿಯೇ ಇರುವನು! (ಎಂದು ಕೈಯಿಂದ ರಾವಣನ ಕೈಯನ್ನು ನೂಕುವಳು.)

(ರಾವಣನು ನಿಜರೂಪವನ್ನು ತಾಳುವನು.)

ಸೀತೆ—(ನೋಡಿ) ಅಯ್ಯೋ, ಆರ್ಯಪುತ್ರನಲ್ಲ! (ತಲ್ಲಣಿಸುವಳು)

ರಾವಣ—ದೇವಿ, ಭಯಪಡಬೇಡ, ಭಯಪಡಬೇಡ. ನಾನು ರಾಮನೇ!

ಸೀತೆ—ನೀನು ಸತ್ತೆ!

ರಾವಣ—ಲಕ್ಷ್ಮಣ, ಇದೇನು?

ಸಾರಥಿ—ಆಯುಷ್ಮಾನ್, ಸುಮ್ಮನೆ ಮಾತಿಂದೇನು?—

ಬಾಲಚಂದ್ರನ ಲಜ್ಜೆಗೊಳಿಸುವ ಘೋರದಾಡೆಗಳೊಪ್ಪಿವೆ
ತುಹಿನಪರ್ವತವೆನಿಪ ಮೈಯಿದು ನಿಬಿಡವಾರಿದ ನೀಲವು;
ಹತ್ತು ದಿಕ್ಕುಗಳಲ್ಲು ಮೂಡಿವೆ ರಮ್ಯಭೀಷಣ ಮೊಗಗಳು
ಇದ್ದಕಿದ್ದವೊಲೀಗ ನಿಜರೂಪನ್ನು ತಳೆದುದು ದೇಹವು. ||೫||

ರಾವಣ—(ತನ್ನನ್ನು ನೋಡಿಕೊಂಡು) ಓಹೊ, ನಾನು ಹೀಗೆ ಆಗಿರುವೆನೋ!
ದೇವಿ, ಹೆದರಬೇಡ! ಹೆದರಬೇಡ!

ನಾನಿದೊ ಭಯಕರನಲ್ಲವು ಚೆಲುವೆಯೆ, ಸುಮ್ಮನೆ ತಲ್ಲಣಿಸುವೆ
ಯೇಕೆ?
ಮೂಜಗದೊಳಗಂ ದೇವಾಸುರರೊಳು ನಿನ್ನನು ಬಿಡಿಸುವರಾರಿಹರು?
ಕೋಪಾಟೋಪದೆ ನುಗ್ಗಿದ ದಿಗ್ಗಜದಂತಾಗ್ರಂಗಳೆ ವಜ್ರಮೆನೆ
ನೋಡೆನ್ನೆದೆಯೊಳು ನಟ್ಟಿವೆಯೆನ್ನನು ರಣದೊಳು ಸೆಣಸುವ
ಪಗೆಯುಂಟೆ? ||೬||

ಸೀತೆ—ಆರ್ಯಪುತ್ರ, ಕಾಪಾಡು! ಕಾಪಾಡು! ಲಕ್ಷ್ಮಣಾ, ಕಾಪಾಡು!
ಕಾಪಾಡು!

ಸಾರಥಿ—ಇನ್ನು ಇದೇಕೆ? ನಿಜರೂಪವನ್ನೇ ತಳೆಯುವೆನು. (ತಳೆಯುವನು)

ಸೀತೆ—ಅಯ್ಯೋ, ಇವನೂ ಕುಮಾರನಲ್ಲ. ಹಾ ಆರ್ಯಪುತ್ರ, ಹಾ
ಕುಮಾರ, ರಾಕ್ಷಸನ ಕೈಯಿಂದ ನನ್ನನ್ನು ಬಿಡಿಸಿರಿ!

(ನೇಪಥ್ಯದಲ್ಲಿ—'ಇದೋ, ಬಂದೆ, ಬಂದೆ!')

ಸಾರಥಿ—ಆಯುಷ್ಮನ್! ನೋಡು, ನೋಡು—

ಅಂಕುಶಸನ್ನಿಭಚಂಚುಸಮೇತನು ಕನಕಸ್ತಂಭ ಸುಕಂಧರನು
ವಿದ್ರುಮಖಂಡ ವಿಪಾಟಲ ನೇತ್ರನು ಗೃಧ್ರನಿದೋ ಆಕ್ರಮಿಸುವನು;
ನಿಲ್ಲಲು ತಟ್ಟನೆ ತಾಣವನಿತ್ತಿವೆ ಹೆಮ್ಮರಗಳೆ ತಲೆದೂಗುತ್ತಿ
ರೆಕ್ಕೆಯ ಗಾಳಿಗೆ ಕೊಂಬೆಗಳೆಲ್ಲವು ಹೂಮೊಗ್ಗುಗಳನೆ ಸುರಿಸುತಿರೆ. ||೭||

ಸೀತೆ—ಅಯ್ಯೋ, ನನಗೆ ಯಾರು ಗತಿ? ಏನು ರಕ್ಷಣೆ?

(ನೇಪಥ್ಯದಲ್ಲಿ)

'ರಕ್ಷಕನಿದೊ ನಾಂ ಬಂದೆ ಜಟಾಯು
ದಶರಥಮಿತ್ರನು, ರಥ ನಿಲಲಿ!
ಅಜ್ಞರ ತಪ್ಪನು ಮನ್ನಿಸಲಪ್ಪುದು
ಬಿಡು ಬಿಡು ರಾವಣ ಪರಸತಿಯ!' ||೮||

ರಾವಣ—(ನಗುತ್ತಾ) ಅಹಹ, ಈ ಹಕ್ಕಿಯು ನನ್ನ ತಪ್ಪನ್ನು ಮನ್ನಿಸುವು
ದಂತೆ! ಸಾರಥಿ, ಚಾವಟಿಯಿಂದ ಹೊಡೆದು ಇದನ್ನು ರಥಮಾರ್ಗದಿಂದ

ಆಚೆಗೆ ಓಡಿಸು. ಈ ಹಕ್ಕಿಗೆ ನನ್ನ ಯೋಗ್ಯತೆ ಸರಿಯಾಗಿ ಗೊತ್ತಿಲ್ಲ.

(ನೇಪಥ್ಯದಲ್ಲಿ)

'ಗೊತ್ತಿದೆ, ಎಲ್ಲಾ ಗೊತ್ತಿದೆ—

ಕೈಲಾಸದಲಿ ಮುರಿದ ಮಾನಶೃಂಗನು ಎಂದು
ಅರ್ಜುನನ ಸೆರೆಯಲ್ಲಿ ಚಿರಬಂದಿಯೆಂದು ;
ವಾಲಿಬಾಲದ ಸುರುಳಿ ಬಿಗಿದ ತೋಳವನೆಂದು
ಬಲ್ಲೆ ತ್ರಿಜಗತ್‌ಧೂಮಕೇತು ನೀನೆಂದು. ||೯||

ರಾವಣ—ಹಹಹಾ, ಈ ಹಕ್ಕಿ ತುಂಬಾ ವಾಚಾಳಿ!—

ನಿಲ್ಲು, ಸೀತೆಯು ನನ್ನ ಶೌರ್ಯವನು ವೀಕ್ಷಿಸಲಿ !
ರಣವಿಜೃಂಭಣಲೋಲ ಶಸ್ತ್ರದಿಂದ ;
ಹದ್ದೆ, ಪುಕ್ಕವ ತರಿದು ನಿನ್ನ ಕೆಡಹುವೆ ನೆಲಕೆ
ದೇವೇಂದ್ರನದ್ರಿಗಳ ಗೈದ ತೆರದೆ. ||೧೦||

(ಪ್ರವೇಶಿಸಿ)

ಜಟಾಯು—ಇರಲಿ, ನೋಡೋಣ—

ಕಾಡ ಕಿಚ್ಚಿಂ ನಿಶಿಯೊಳುರಿಯುವ ಅಂಜನಾದ್ರಿಯ ತುದಿಗಳೊಲ್
ಪಿಂಗಕೇಶದೆ, ವಿಲಯನೋಘನ ಪೋಲ್ವ ನಿನ್ನೀ ಮುಖಗಳಂ
ಸೀಳುಸೀಳುತೆನ್ನ ಕೊಕ್ಕಿಂ ತೆಕ್ಕನುಕ್ಕಿಸಿ ರಕ್ತವಂ
ಕ್ಷತ್ರಪತ್ನಿಯು ನೋಡೆ ಹತ್ತೂ ದಿಕ್ಕಿಗಿಕ್ಕುವೆ ನಿಕ್ಕುವಂ ||೧೧||

ಸಾರಥಿ—ಇದೋ ಇದು ಓಡಿಬರುತ್ತಿದೆ!

ರಾವಣ—ಏ, ನಿಲ್ಲು ಈಗ!

(ಇಬ್ಬರೂ ಯುದ್ಧ ಮಾಡುವರು)

ರಾವಣ—ಇದೋ ಹೊಡೆದೆ! (ಹೊಡೆಯುವನು)

ಸೀತೆ—ಅಯ್ಯೋ! ಅಕಟಾ! (ಕಣ್ಣುಮುಚ್ಚಿಕೊಳ್ಳುವಳು)

ಸಾರಥಿ—ಹದ್ದಿಗೆ ದೊಡ್ಡ ಪೆಟ್ಟು ಬಿದ್ದಿದೆ. ಇದು ಈಗ—

ಅರುಣಜಲ ಸಿಕ್ತದೇಹಂ
ಪಿರಿದುಂ ಶ್ರಮದಿಂದೆ ಜೋಲ್ವ ಕಂಧರಸಹಿತಂ ।

ಪರಿಣತದಿನ ಮೇಘಾರುಣ-
ಮುರುಳಿರ್ಪುದು ಗಗನದಿಂದೆ ವಿಹಗಂ ಭರದಿಂ ||೧೨||

ಸೀತೆ—ಅಯ್ಯೋ, ದೇವತೆಗಳೆಲ್ಲರೂ ನಿಷ್ಕರುಣರು! ಅಧನ್ಯೆಯಾದ ನನ್ನ ಸಲುವಾಗಿ ಈ ಹಕ್ಕಿಯೂ ಶೋಚನೀಯಾವಸ್ಥೆಯನ್ನು ಪಡೆಯಿತು.

ರಾವಣ—ಸಾರಥಿ, ಕುದುರೆಗಳನ್ನು ಬೇಗ ಓಡಿಸು.

ಸಾರಥಿ—ಆಯುಷ್ಮಂತನ ಅಪ್ಪಣೆ. (ಯೋಚಿಸಿ, ಸ್ವಗತ) ಇವನಾದರೋ—

ಅನುಕೂಲ ವಿಹಿತ ಹಿತಮಂ
ಮನನೀಯಮನಂತೆ ಶಾಸ್ತ್ರಸಂಗತಮಂ ನಾ- |
ನನುನಯದಿಂ ನುಡಿದೊಡೆ ಕೇ-
ಳನನಂಗಂ ಎತ್ತಲೆತ್ತ ಗುಣಸಂಗ್ರಹಣಂ ||೧೩||

(ನಿಷ್ಕ್ರಮ—ಎಲ್ಲರೂ)

**ಇಲ್ಲಿಗೆ ನಾಲ್ಕನೆಯ ಅಂಕ ಮುಗಿದುದು.**

# ಐದನೆಯ ಅಂಕ

(ಮಂಡೋದರಿ, ಚೇಟಿ ಇವರ ಪ್ರವೇಶ)

ಮಂಡೋದರಿ—ಇದು ಹೀಗಾಗುವದೂ ಶಕ್ಯವೆ ?

ಚೇಟಿ—ಭಟ್ಟಿಸಿಯ ಬಾಯಿಂದ ಅನುತಾಪದ ಉದ್ಗಾರ ಬಂದಂತಿದೆ ?

ಮಂಡೋದರಿ—ಚೇಟಿ, ಅಶೋಕವನವನ್ನು ಈ ಮೊದಲೇ ಕಂಡಿರುವೆಯಷ್ಟೆ ?

ಚೇಟಿ—ಅಲ್ಲಿಯೇ ಅಲ್ಲವೆ ಪ್ರಭುವಿನ ಬಂದಿಯಾಗಿ ತಾಪಸನ ಹೆಂಡತಿಯಿರುವುದು ? ಅವಳಿಂದೇನು ?

ಮಂಡೋದರಿ—ಅವಳಿಂದಾಗಿ ನಮಗೆ ವಿನಾಶವೊದಗುವಂತೆ ಕಾಣುತ್ತದೆ.

ಚೇಟಿ—ಭಟ್ಟನಿ, ಹೆಣ್ಣು ಹುಲ್ಲೆಗಳಿಗೆ ಎಂದು ತಾನೆ ಹುಲಿಯಲ್ಲಿ ನಂಬಿಕೆ ಬಂದೀತು ? ಹೇಗೆ ಬಂದಳೋ ಅವಳು ಹಾಗೆಯೇ ಹೋಗುವಳು. ಭಟ್ಟನಿಯೇ ಲಂಕೇಶ್ವರಿಯಾಗಿ ಉಳಿಯುವಳು !

ಮಂಡೋದರಿ—ನೀನು ಹುಚ್ಚಿಯಂತೆ ಆಡುತ್ತಿರುವೆ. ಇಷ್ಟು ಪರಿಚಿತಳಾದರೂ ನನ್ನ ಅಭಿಪ್ರಾಯವನ್ನು ತಿಳಿಯಲಾರೆ. ಇಂದು ನನಗೆ ಒಂದು ಕೆಟ್ಟ ಕನಸು ಕಂಡಿತು.

ಚೇಟಿ—ಅಮಂಗಳ ಶಾಂತವಾಗಲಿ ! ಭಟ್ಟನಿಯು ಹೇಳಬೇಕು.

ಮಂಡೋದರಿ—ಚೇಟಿ, ಕೇಳು—

ಚೇಟಿ—ಗಮನವಿಟ್ಟು ಕೇಳುತ್ತಿದ್ದೇನೆ.

ಮಂಡೋದರಿ—ದಿಙ್ಮುಖಗಳೆಲ್ಲವನ್ನೂ ವಿಶಾಲತರಂಗಸಹಸ್ರಗಳಿಂದ ವ್ಯಾಪಿಸುತ್ತಾ, ಮರಕತಗಿರಿನಿಕರದಂತೆ ನೀಲವೂ, ಪರಿಭ್ರಮಿತ-ತಿಮಿ-ತಿಮಿಂಗಿಲ-ಮಾತಂಗ-ಮಕರ-ಸಂಕುಲವೂ ಆದ ಮಹೋದಧಿಯು ಅತ್ತಿಂದಿತ್ತ ತೂರಿಬಂದ ಹುಲ್ಲುಕಡ್ಡಿಗಳಿಂದಲೇ ಪೀತ-ಸಲಿಲ-ಸರ್ವಸ್ವವಾಗಿ ಕ್ಷಣಾರ್ಧದಲ್ಲಿ ಬರಿದಾಗಿಹೋಯಿತು.

ಚೇಟಿ—ಅಯ್ಯೋ, ಅನ್ಯಾಯವೇ ! ಆಮೇಲೆ ?

ಮಂಡೋದರಿ—ಧೂಳಿಡಿದು ಒರಟಾದ ಕೂದಲಿನವಳೂ, ಹಲ್ಲು ಬಿದ್ದು ವಿಕಾರವಾದ ಬಾಯವಳೂ, ಕಿಡಿಯುಗುಳುವ ಕಣ್ಣವಳೂ, ಬರಿಗಿವಿಯವಳೂ, ತಲೆಯೋಡಿನ ಬಣ್ಣದವಳೂ ಆದ ಅಮಂಗಳ ಸ್ತ್ರೀಯೊಬ್ಬಳು ಬಂದು ನನ್ನನ್ನು ಗಾಢವಾಗಿ ಅಪ್ಪಿಕೊಂಡಳು.

ಚೇಟಿ—ಅಕಟಕಟಾ ! ಆಮೇಲೆ ?

ಮಂಡೋದರಿ—ಆ ಸೀತೆಯಾದರೋ ಧವಳ-ದುಕೂಲ-ಧಾರಿಣಿಯೂ,ಚಂದನ ರಸ-ಪರಿಶೋಭಿತ-ಪಯೋಧರೆಯೂ, ಮಲ್ಲಿಕಾ-ಕುಸುಮ-ವರ್ಧಿತ-ಕಚ-ಶೋಭೆಯೂ ಆಗಿ ಪತಿಯ ಕೈವಿಡಿದು ಪುಷ್ಪಕವನ್ನೇರುವಂತೆ ನನಗೆ ಕಂಡಳು. ಅನಂತರ ಅಪರಾತ್ರಿಯಲ್ಲೇ ನನ್ನ ನಿದ್ರೆಯೂ ಕೊನೆಗಂಡಿತು.

ಚೇಟಿ—ಭಟ್ಟಿನಿ, ಸಂತಾಪವನ್ನು ಬಿಡು. ವೈದ್ಯರು ಸ್ವಪ್ನಕ್ಕೆ ಅನೇಕ ಕಾರಣಗಳನ್ನು ಹೇಳುತ್ತಾರೆ. ಮೂಲೋಕವನ್ನೇ ಭಯಗೊಳಿಸುವ ನಮಗೆ ಭಯವೆಲ್ಲಿಂದ ತಾನೆ ಬಂದೀತು ?

( ನೇಪಥ್ಯದಲ್ಲಿ )

“ ಮುಗಿಲೆಲ್ಲಂ ವರ-ಗಂಧ-ಸಿಕ್ತ-ಸುಮದಾ ಸದ್ವೃಷ್ಟಿಯಂ ಗೈಯಲಿಂ
ಸುರ-ಸಿಂಧೂದಕ-ವೀಚಿ-ವಾಹನವನುಂ ಸ್ವರ್ಗಾನಿಲಂ ಬೀಸಲಿಂ !
ಬನದೈಶ್ವರ್ಯಮನೇರಿಸಿಂ ಬನಗಳೇ ನೀವುಂ ಬಸಂತಾದಿಗಳ್
ಸುಖ-ದಾನೈಕ-ಕರಂಗಳಿಂದೆ ಶಶಿಯೇ ದಿಗ್ಭಾಗದೊಳ್ ಪೋಗು ನೀಂ
||೧||

ಮಂಡೋದರಿ—ಓ, ಘೋಷಣೆಯಂತಿದೆ !

ಚೇಟಿ—ಹಾದು, ಭಟ್ಟಿನಿ.

ಮಂಡೋದರಿ—ಇದರ ಮೂಲವನ್ನು ತಿಳಿದು ಬಾ.

ಚೇಟಿ—ಭಟ್ಟಿನಿಯ ಅಪ್ಪಣೆ. (ನಿಷ್ಕ್ರಮ)

ಮಂಡೋದರಿ—ಇಲ್ಲಿ ವಿಚಾರಿಸುವುದೇನಿದೆ? ಆ ಮನುಷ್ಯಸ್ತ್ರೀಯ ಮನಸ್ಸನ್ನು ಮರುಳುಗೊಳಿಸುವುದಕ್ಕಾಗಿ ಮಹಾರಾಜನ ಪ್ರಯತ್ನವೇ ಇದು.

( ಪ್ರವೇಶಿಸಿ )

ಚೇಟಿ—ಭಟ್ಟಿನಿಗೆ ಜಯವಾಗಲಿ. (ಕಿವಿಯಲ್ಲಿ) ಇಷ್ಟೆ !

ಮಂಡೋದರಿ—ಸುಮ್ಮನೆ ನಿನಗೆ ಆಯಾಸ ಕೊಟ್ಟಂತಾಯಿತು. ಈಗ ಮಹಾರಾಜನು ಏನು ಮಾಡುತ್ತಿರುವನು ?

ಚೇಟಿ—ಪ್ರಭು ಸೀತೆಯನ್ನು ಕಾಣುವುದಕ್ಕೆಂದು ಸಂಧ್ಯಾಕಾಲದ ವೇಷವನ್ನು ಡುತ್ತಿರುವನು.

ಮಂಡೋದರಿ—ಚೇಟಿ, ಹಾಗಾದರೆ ಬಾ, ಹೋಗೋಣ. ಮಹಾರಾಜನಿಗೆ ಕಾಣದಂತೆ ಅಶೋಕವನವನ್ನು ಪ್ರವೇಶಿಸಿ, ಬಳ್ಳಿಗಳ ಮರೆಯಲ್ಲಡಗಿದ್ದು, ಇಚ್ಛೆಯಿಲ್ಲದ ಸೀತೆಯಲ್ಲಿ ಮಹಾರಾಜನ ಕಾಮುಕವೃತ್ತಿಯನ್ನು ನೋಡಿ ನಗೋಣ.

ಚೇಟಿ—ಭಟ್ಟಿನಿಯ ಅಪ್ಪಣೆ.

(ನಿಷ್ಕ್ರಮ—ಇಬ್ಬರೂ)

## ಇದು ಪ್ರವೇಶಕ

(ಪರಿವಾರದೊಂದಿಗೆ ಕಾಮಾವಸ್ಥೆಯಲ್ಲಿರುವ ರಾವಣನ ಪ್ರವೇಶ)

ರಾವಣ—(ವೈಬಿಸಿಯನ್ನು ಲಕ್ಷಿಸಿ) ವರ್ಷವರ, ನಾನು ಎಂದೋ ಹೊರ ದೂಡಿಯಾಗಿರುವ ದಿವಾಕರನಿಗೆ ಲಂಕೆಯಲ್ಲೇನು ಕೆಲಸ? ಬೇಗ ಹೋಗಿ ಮಂತ್ರಿಯಾದ ಚಿತ್ರಯೋಧಿಯನ್ನು ಕರೆದುಕೊಂಡು ಬಾ.

ವರ್ಷವರ—(ಸ್ವಗತ) ಅಬ್ಬಾ, ಪ್ರಭುವಿನ ಮದನೋನ್ಮಾದವು ಅತಿಯಾಗಿದೆ.

ಇರುಳೊಳ್ ಮೂಡಿರೆ ಚಂದ್ರಂ
ಪರಿದರ್ಶನ ಹರ್ಷಕಾರಿ ಸಾಗರ ಜಲಮಂ
ನೆರೆಯುಕ್ಕಿಸಿ ಕಿರಣಗಳಿಂ,
ಅರಿಯಂ ಪ್ರಭು ಶಶಿಯನಿಂತು ಹಿಮಶೀತಲನಂ ||೨||

ರಾವಣ—ಏಕೆ ತಡಮಾಡುವೆ?

ವರ್ಷವರ—ಪ್ರಭುವಿನ ಅಪ್ಪಣೆ. (ಸ್ವಗತ) ಇಂತಹ ರೋಗಕ್ಕೆ ಮಂತ್ರಿಗಳು ವೈದ್ಯರಲ್ಲ! (ನಿಷ್ಕ್ರಮ)

ರಾವಣ—(ಯೋಚಿಸುತ್ತಾ, ನೋಡಿ) ಇವನು ಸೂರ್ಯನಲ್ಲ. ನಾನು ಅಭಯ ವಿತ್ತಿರುವ ಚಂದ್ರನೇ ಇವನು. ಏಕೆಂದರೆ—

ಸೂರ್ಯನೊ ಚಂದ್ರನೊ ಕಾಮಿಗಳರಿಯರು
ಸಾವಿರ ಕಿರಣಗಳುರಿಸುತಿರೆ ;
ನೀಲಸವರ್ಣದ ಲಾಂಛನವೊಂದೇ
ಚಂದ್ರನೆಯೆನ್ನಲು ಲಕ್ಷಣವು. ||೩||

(ಹಾಗೆಯೇ ಯೋಚಿಸುತ್ತಾ) ಇದು ಸ್ವಯಂಕೃತವಾದ ವ್ಯಸನ—

ಎನ್ನ ಅಪ್ಪಣೆಯಿಲ್ಲದಾವನು ತನ್ನ ರಶ್ಮಿಗಳಿಂದಲಿ
ದಿಗ್ದಿಗಂತದ ಪದ್ಮಗಳನೇ ಬಾಡಿಸನೊ ಮೇಣಾತನೆ ;
ಚಂದ್ರನೆನ್ನನು ಸುಡುತಲಿರುವನು ನೆಟ್ಟಸಿದಿರೊಳಗೆನ್ನಲು
ಅಬಲನಪ್ಪನೆ ಸಬಲನೆನಿಪನು ದಶೆಯ ಬಲದಿಂದಿಳೆಯೊಳು ॥೪॥

(ಮಂತ್ರಿಯ ಪ್ರವೇಶ)

ಮಂತ್ರಿ— (ಸುತ್ತಲೂ ನೋಡಿ) ಬೆಳುದಿಂಗಳ ಸೊಬಗಿನ ರಸಿಕತೆಯನ್ನು ಎಷ್ಟೋ ದಿನದ ಮೇಲೆ ರಾಕ್ಷಸಲೋಕವು ಪಡೆಯುತ್ತಿದೆ. ಏಕೆಂದರೆ—

ಉದಿಸುತಿರುವನು ಅಮೃತಕಿರಣನು
ಮನ್ಮಥನ ಸೇನಾಪತಿ !
ಶಿಶಿರರಶ್ಮಿಯ ದೇವನು !
ಪ್ರಲಯಕಾಲದ ದುಗ್ಧಸಾಗರ-
ದಲ್ಲಿ ಮೂಜಗವೆಲ್ಲವು
ಮುಳುಗಿತೆನಿಸಲು ಮೆರೆವುದು
ಅವನ ಚಂದ್ರಿಕೆಯಿಂತಿದು. ॥೫॥

ರಾವಣ—

ಹಿಮಕರನೆ, ನೀನೆಸೆವ ಹಿಮಶೀತರಶ್ಮಿಗಳು
ಮದನದಾಸನನೆನ್ನನುರಿಸುತಿರಲು ;
ಬಲವಲ್ತು ನಿನ್ನದಿದು ಮದನನಾ ಬಲವಲ್ತು
ಬಸವಳಿವ ಸೀತೆಯದೆ ಬಲವೆಂಬೆನು. ॥೬॥

ಮಂತ್ರಿ—

ಯೋಗ್ಯನಲ್ಲದ ದಣಿಯನೆಣಿಸದೆ ರಾಮಬಾಣದೆ ಸಾಯಲೇ ?
ಪ್ರಭುವಿಗಪ್ರಿಯವನ್ನು ನುಡಿಯುತ್ತವನ ಕೋಪದೆ ಮಡಿಯಲೇ ?
ಪಕ್ಷವೆರಡೂ ಪಥ್ಯವಲ್ಲವು ; ದಣಿಯ ಕೈಯಲಿ ಮಡಿವುದೇ
ಲೇಸೆನಿಪ್ಪುದು ದಣಿಯ ಮರಣವ ನೋಡಲಾರೆನು ಕಣ್ಣಿನಿಂ ॥೭॥

ಪ್ರಭುವಿನ ಅವಸ್ಥೆ ಕಷ್ಟತರವಾಗಿದೆ. ಇವನು ಕೂದಲೆಳೆಯಿಂದ ಬದ್ಧನಾಗಿ ಒನಕೆಯ ಪೆಟ್ಟಿಗೆ ಗುರಿಯಾಗಿದ್ದಾನೆ ! (ನಡೆಯುತ್ತಾ, ನೋಡಿ) ಇದೋ ಪ್ರಭು—

ಧ್ಯಾನೈಕಾಗ್ರನಡಂಗುತಾಕಳಿಸುವಂ ನಿಶ್ವಾಸತಪ್ತಾಧರಂ
ಕಾರ್ ತೀರಲ್ ನಿಜನೀಲವರ್ಣಮುಳಿದಾ ಮೇಘೋಪಮಂ
ತಾನಿವಂ ।
ಪೀರಲ್ಕ್ಯಾರ್ವಕೃಶಾನುವೆಲ್ಲ ಜಲಮಂ ವಾರಾಶಿ ತಾನಿರ್ಪವೋಲ್
ಕಂದರ್ಪಂ ಸುಡೆ ಗೂಢಮಾಗಿ ಕೃಶಮೀ ಕಾಯಂ ಪರರ್
ಕಾಣದೋಲ್ ॥೮॥



(ಸಮೀಪಿಸಿ) ಪ್ರಭುವಿಗೆ ಜಯವಾಗಲಿ !

ರಾವಣ—ಅಪೂರ್ವವಾದ ಸುದ್ದಿಯೇನಾದರೂ ಉಂಟೆ?

ಮಂತ್ರಿ—(ಸ್ವಗತ) ಪ್ರಭು ಶಾಂತನಾಗಿಯೇ ಕೇಳುತ್ತಿದ್ದಾನೆ. (ಪ್ರಕಾಶ) ಹೌದು, ಜನರ ಪ್ರವಾದವೊಂದುಂಟು.

ರಾವಣ—ತಡೆ. ರಾಮನು ವಾಲಿಯನ್ನು ಕೊಂದು ಸುಗ್ರೀವನ ಗೆಳೆಯನಾಗಿರುವನೆಂಬುದು ತಾನೆ?

ಮಂತ್ರಿ—ಹೌದು. ಸ್ವಲ್ಪ ವಿಶೇಷವೂ ಉಂಟು.

ರಾವಣ—ಅದನ್ನು ಹೇಳು.

ಮಂತ್ರಿ—ಅವನ ಅಪ್ಪಣೆಯಂತೆ ಸೀತೆಯನ್ನು ಹುಡುಕುತ್ತಾ ದಿಕ್ಕುದಿಕ್ಕಿನಲ್ಲಿಯೂ ಕಪಿಸೈನ್ಯಗಳು ತಿರುಗುತ್ತಿವೆಯಂತೆ.

ರಾವಣ—ಏನು, ಏನು? 'ಅವನ ಅಪ್ಪಣೆಯಂತೆ ಸೀತೆಯನ್ನು ಹುಡುಕುತ್ತಾ ದಿಕ್ಕುದಿಕ್ಕಿನಲ್ಲಿಯೂ ಕಪಿಸೈನ್ಯಗಳು ತಿರುಗುತ್ತಿವೆ'ಯೆ? ನೋಡು—

ಸರ್ಪ ತಾರೆ ಕಾಡು ಬೆಟ್ಟವೆಲ್ಲ ಕೈದುವಾಗಿರೆ
ಅಮರವಿಜಯಿ ದನುಜಸೇನೆ ತಾನೆ ಕಾದಲೈತರೆ ;
ಕಪಿಯ ಸೇನೆ ರಣದ ರಂಗದಲ್ಲದೆಂತು ನಿಲ್ವುದು
ಉಪವನಂಗಳಲ್ಲಿ ಬಳ್ಳಿಚಿಗುರ ಕೊಯ್ವ ಹಿಂಡದು. ॥೯॥

ಮಂತ್ರಿ—ಕಪಿಗಳೇನೋ ಹಾಸ್ಯಾಸ್ಪದವೇ ನಿಜ, ಆದರೆ—

ರಾವಣ—ಆದರೇನು, ಹೇಳು.

ಮಂತ್ರಿ—ಧನುರ್ಧಾರಿಗಳಲ್ಲೆಲ್ಲ ದಾಶರಥಿ ಅಜೇಯನೆನ್ನುವರು.

ರಾವಣ—ಏನು, ಏನು! 'ಧನುರ್ಧಾರಿಗಳಲ್ಲೆಲ್ಲ ದಾಶರಥಿ ಅಜೇಯ'ನೆನ್ನುವರೆ? ನೋಡು—

ಯಾರು ಕಾದಲು, ಮುಂದೆ ನಿಲ್ಲಲು ನೆರೆಯನೋ ದೇವೇಂದ್ರನು
ಯಾರ ತೋಳ್ಗಳು ಶಿವನಿವಾಸದ ಗಿರಿಯನಳ್ಳಾಡಿಸಿದುವೋ ।
ಯಾರ ಕೈಯಲಿ ಸೋತು ಪರಿಭವಪದಕೆ ಗ್ರಹವೀಡಾದುವೋ
ಶತ್ರುವವನಿಗೆ ಮನುಜನೆನ್ನುವ ನೀನೆ ಹಾಸ್ಯಸ್ಥಾನವು. ॥೧೦॥

ಮಂತ್ರಿ—ಏನೆಂದೆ ! ರಾಮನು ಬರಿಯ ಮನುಷ್ಯನೆನ್ನುವೆಯಾ ?

ಗುರುವಿನಾಣತಿಯಂತೆ ಕಾಡೊಳಗೆ ವಾಸಿಸುವ
ರಘುಪತಿಯು ಕೇವಲವೆ ಮನುಜನಲ್ಲ ;
ಭುವನಗಳಿಗುದ್ಧಾರ ಸಂಹಾರ ಕಾರಣನು
ಸೂರ್ಯಕುಲಸಂಜಾತ ಹರಿಯೆ ಅವನು. ॥೧೧॥

ರಾವಣ—ಓ, ಕೇಶವನೆನ್ನುವೆಯೋ ? ಅಬ್ಬಾ, ಇವನಿಗೆ ಬೆದರಬೇಕಾದ್ದೇ !

ಇವನಣ್ಣ ದೇವೇಂದ್ರನನು ಗೆದ್ದು ಬಂದು
ಎನ್ನವರು ಸಗ್ಗವನು ಕೊಳ್ಳೆಯಿಡುವಂದು ;
ಶಚಿಯಂಜೆ ಬೆದರುತಿರಲಪ್ಸರೆಯರಂತೆ
ವಿಷ್ಣುವಿನ ವಿಕ್ರಮವು ಎಲ್ಲಡಗಿತಂತೆ ? ॥೧೨॥

ಮಂತ್ರಿ—ಏನು, ಏನು ? ದೇವತೆಗಳನ್ನು ಗೆದ್ದವರು ಯಾರು ?

ರಾವಣ—ಓ, ದೇವತೆಗಳನ್ನು ಗೆದ್ದಾತನಾರೆಂದು ಕಾಣೆಯಾ ?

ಮಂತ್ರಿ—ಕಾಣೆ.

ರಾವಣ—ಇದೋ ನಾನೇ !

ಮಂತ್ರಿ—ಇದು ಸುಳ್ಳು—

ಯಮ ವರುಣ ಸುತ್ರಾಮ ಮೋಕ್ಷ್ ಕುಬೇರಾದಿಗಳ
ಸುರರ ನೀಂ ಜಯಿಸಿರಲು ಕಷ್ಟಪಡದೆ ;
ಆ ನಿನ್ನ ಕಡುಬಲ್ಮೆ ಶಿಥಿಲಗೊಂಡಿಹುದೇಕೆ
ಕುಸುಮಬಾಣಗಳಿಂದೆ ಕುಸುಮಾಸ್ತ್ರನ ? ॥೧೩॥

ರಾವಣ—ಏನು, ಕುಸುಮಾಸ್ತ್ರನು ನನ್ನನ್ನು ಪ್ರಹರಿಸುತ್ತಿರುವನೆಂದು ತಿಳಿದೆಯಾ?

ಮಂತ್ರಿ—ಪ್ರತ್ಯಕ್ಷವಾಗಿಯೇ ಕಾಣುತ್ತಿದೆ.

ರಾವಣ—ಪ್ರತ್ಯಕ್ಷವಾದ ವಿಷಯ ಹೀಗಿದೆ ನೋಡು—

ಪುರಹರನು ಕೋಪದಲಿ ತೆರೆದಗ್ನಿ ನೇತ್ರವನು
ಬೆಂಕಿಕಿಡಿಗಳನಂದು ಸುರಿಸುತಿರಲು;
ಸುಟ್ಟು ಸೀಕರಿವೋಗಿ ನಾಮಾವಶೇಷನೆನೆ
ಕಾಮನೇ ಪ್ರಹರಿಸಲು ಬರ್ಪನೆಂತು?
ಶಾರದ ಹಿಮಾಂಶುವಿನ ಬಗೆಗೊಳಿಪ ಸೊಬಗೆಸೆಯೆ
ಲೋಲತಾರಕಯುತೆಯ, ಭ್ರೂರುಚಿರೆಯ,
ಜಾನಕಿಯ ರಮಣೀಯ ವದನವೇ ಗೈದಿಹುದು
ವಿವಶನೆನ್ನುವ ತೆರೆದೊಳೆನ್ನನಿಂದು. ||೧೪||

ಮಂತ್ರಿ—

ವೇದದ ವಿದ್ಯೆಯುನೆಲ್ಲವ ಕಲಿತಿಹೆ
ಭಾವಿಸೆ ಬೊಮ್ಮನ ದಾಯಾದಿ;
ಪರಸತಿಗಾಶಿಸುತೇತಕೆ ನೀನೇ
ಗುರಿಯಹೆ ನಿಂದೆಗೆ ಸಜ್ಜನರ? ||೧೫||

ರಾವಣ—ಏನು? ಇದು ನಿಂದ್ಯವೋ?

ಮಂತ್ರಿ—ಇದಕ್ಕಿಂತ ನಿಂದ್ಯವಾದುದೇ ಇಲ್ಲ.

ರಾವಣ—ಹಾಗಾದರೆ—

ನೂರಶ್ವಮೇಧಗಳ ವಿಹಿತದಿಂ ಗೈದವನು
ಪೂಜ್ಯವೇದಗಳಲ್ಲಿ ವಿನುತನಾದವನು;
ಮರುತರೊಡೆಯನು ಮತ್ತೆ ವಿಷ್ಣುವಿನ ಪಿರಿಯಣ್ಣ
ಹರಿ(=ಇಂದ್ರ)ಯಹಲ್ಯಾಯುತನೆ ಆಹೂತನೇಕೆ?
||೧೬||

ಮಂತ್ರಿ—ನಿಂದೆಯ ವಿಷಯ ಹಾಗಿರಲಿ. ಸಕಲಾರ್ಥಗಳಿಗೂ ಸಾಧನವಾದ ಧರ್ಮವನ್ನು ನಾವು ಹೊರದೂಡುವುದೆ?

ರಾವಣ—ಶಾಸ್ತ್ರಜ್ಞನೆ, ಸಾಧನದ ಸ್ವೀಕಾರವು ಸಾಧ್ಯವನ್ನೇ ಅವಲಂಬಿಸುವುದಲ್ಲವೆ? ನೋಡು—

ಸುರಪದವ ಬಯಸುವೊಡೆ, ಶಕ್ರನವಜ್ರದ ಹತಿಗೆ
ಅಲಗು ಕಂದದ ಚಂದ್ರಹಾಸವೇ ಬಂಧು ;
ನೀನೊರೆವ ಧರ್ಮವದು ದುರ್ಬಲರ ಸಾಧನವು
ಎಮ್ಮಂಥ ಪ್ರಬಲರಿಗೆ ಸಕಲವೂ ಪಥ್ಯ. ||೧೭||

ಮಂತ್ರಿ—ಪ್ರಭುವಿನ ಶಕ್ತಿಯೇನೋ ಅಂತಹುದೇ. ತಮ್ಮಂತಹ ಶಕ್ತಿಶಾಲಿಗಳು ಸದಾಚಾರವನ್ನು ಪರಿತ್ಯಜಿಸಬೇಕೆಂದಾದರೆ, ರಾಜರ್ಷಿಗಳ ನಿಯಮಪಾಲನೆಯಲ್ಲಿ ನಿರತನಾಗಿರುವ ರಾಮನೂ ಸದಾಚಾರವನ್ನು ಬಿಡಬೇಕೆಂದಾಗುವುದಿಲ್ಲವೆ?

ರಾವಣ—ಏನು, ಏನು? ರಾಮನು ಸತ್ಪುರುಷನೆಂದು ಹೇಳುವೆಯಾ? ನೋಡು—

ಯಾರು ತಾಟಕೆಯನ್ನು ಕೊಲ್ಲುತೆ ವೀರಧರ್ಮವ ಮುರಿದನೋ,
ಯಾರು ವಾಲಿಗೆ ಶರವನ್ನಿಟ್ಟನೊ, ತಮ್ಮನೊಳು ಕಣ್ ನಟ್ಟಿರಲ್,
ವಿಷಮವೆನಿಸಲು ಕ್ಷಾತ್ರಧನು, ಮುನಿಜಟೆಯನಾವನು ತಳೆದನೋ
“ಅವನೆ ಸಜ್ಜನ!”—ಪರರ ಮಾತೇ ವೇದವೆಂಬರು ಮೂಢರು!

ಮಂತ್ರಿ—ನನ್ನ ಕರ್ತವ್ಯ ಇಷ್ಟೇ!

ರಾವಣ—ನಿನ್ನ ಕರ್ತವ್ಯವೇನು? ಹೇಳು.

ಮಂತ್ರಿ—ತ್ರಿವರ್ಗವನ್ನು ದೊರಕಿಸಿಕೊಡುವುದು.

ರಾವಣ—ತ್ರಿವರ್ಗ ಯಾವುದು?

ಮಂತ್ರಿ—ಧರ್ಮಾರ್ಥಕಾಮಗಳು.

ರಾವಣ—ಒಂದೊಂದಾಗಿ ಬಿಡಿಸಿ ಹೇಳು.

ಮಂತ್ರಿ—ಧರ್ಮ....

ರಾವಣ—

ದಂಡ್ಯರನು ದಂಡಿಸಲು ನಿದ್ದೆಗೈಯದ ಜವನೆ
ಎನ್ನಿಂದೆ ದಂಡ್ಯನೆನೆ ಪೇಳ್ವುದೇನು?
ಸಗ್ಗದೈಸಿರಿಯೆಲ್ಲ ಎನ್ನ ವಶದಲ್ಲಿರಲು
ಧರ್ಮವನು ನಾನೇಕೆ ಗಳಿಸಿಯೇನು? ||೧೯||

ಮುಂದಿನದು ಯಾವುದು?

ಮಂತ್ರಿ—ಅರ್ಥ....

ರಾವಣ—ಅರ್ಥದಿಂದ ಆಗತಕ್ಕುದೇನು ?

ಮಂತ್ರಿ—ಕೋಶ, ದಂಡ, ಇವುಗಳ ಅಭಿವೃದ್ಧಿ !

ರಾವಣ— ಗಗನದಲಿ ಸಂಚರಿಪ ದನುಜರೆನ್ನಯ ದಂಡ,
ಆ ಕುಬೇರನೆ ನನ್ನ ಧನದ ಕೋಶ ;
ಮೂಲೋಕವೆಲ್ಲವಿದು ನನ್ನಧೀನವೆನಲ್ಕೆ
ದಿಟವ ನುಡಿ ನನಗರ್ಥವೇತಕಿಂದು ? ||೨೦||

ಕಡೆಯದು ಯಾವುದು ?

ಮಂತ್ರಿ—ಕಾಮ !

ರಾವಣ—ಅದನ್ನೇ ನಾವು ಬಯಸುತ್ತಿರುವುದು. ಆದುದರಿಂದ ನನ್ನ ಇಷ್ಟವನ್ನು ನೀನು ನೆರವೇರಿಸಬೇಕು.

ಮಂತ್ರಿ—ಕಾಮದಲ್ಲಿಯೂ ಉತ್ತಮವಾದುದರಲ್ಲಿ ಮಾತ್ರ ಮನಸ್ಸನ್ನಿಡಬೇಕು.

ರಾವಣ—ಹಾಗೆಯೇ ಮಾಡುತ್ತಿದ್ದೇನೆ.

ಮಂತ್ರಿ—ಹಾಗಾದರೆ—

ಇವಳ ಬಿಡು ಪರಭುಕ್ತೆಯಾಗಿರ್ಪಳನ್ನು
ಭೂಮಿಚರೆಯನು ನಾಡೆ ನಿಷ್ಕಾಮೆಯನ್ನು ;
ಇವಳ ಮೀರಿಸದಿಹರೆ ಸೌಂದರ್ಯದಲ್ಲಿ
ನಿನ್ನ ಸೆರೆಯಲ್ಲಿರುವ ಶಕ್ರನರಸಿಯರು ? ||೨೧||

ರಾವಣ—ಈ ವಿಷಯದಲ್ಲಿ ಮತ್ತೊಬ್ಬರು ಪ್ರಮಾಣವಲ್ಲ !—

ಪರಭುಕ್ತೆಯೆನಲ್ ಸಿರಿಯಂ
ವರರತ್ನಮನಂತೆ ಪರರೆ ಭೋಗಿಸುತಿರ್ದಾ !
ಪರಮವಿರಾಗಿಣಿಯೆನ್ನುತೆ
ಸರಸತಿಯಂ ತೊರೆವರುಂಟೆ ನೀತಿಯ ನೋಡಲ್ ||೨೨||

ಮಂತ್ರಿ—(ಸ್ವಗತ) ಇನ್ನು ಮುಂದೆ ಆಯುಧಗಳೇ ಗತಿ ! ಪ್ರಭುವಾಗಲೇ ಬುದ್ಧಿವಾದದ ಗಡಿಯನ್ನು ದಾಟಿಯಾಗಿದೆ.

ರಾವಣ—ಹೋಗು. ರಾಮನ ಸುದ್ದಿಯನ್ನು ತಿಳಿಯಲು ಚಾರರನ್ನು ಆಜ್ಞಾಪಿಸು.

ಮಂತ್ರಿ—ಪ್ರಭುವಿನ ಅಪ್ಪಣೆ.

ರಣಭೀತಿಯಿಂದಲ್ಲ, ಪಗೆಯ ಕೆಳೆಯಿಂದಲ್ಲ
ನಿನಗೆ ನಾನಪ್ರಿಯವ ನುಡಿದಿರುವುದು ;
ಕತ್ತಿಯಿಂದಲೆ ನಾಡೆ ಕುತ್ತಿಗೆಯನೊತ್ತಿರೆಯು
ಸುಜನರೊರೆವರು ದಣಿಗೆ ಪಥ್ಯವನ್ನೆ ! ||೨೩||

(ನಿಷ್ಕ್ರಮು)

ರಾವಣ—ವರ್ಷವರ, ಅಶೋಕವನದ ದಾರಿಯನ್ನು ತೋರಿಸು.

ವರ್ಷವರ—ಮಹಾರಾಜನ ಅಪ್ಪಣೆ. ಇತ್ತ ಬರಬೇಕು.

(ಇಬ್ಬರೂ ಉಪವನವನ್ನು ಪ್ರವೇಶಿಸುವರು)

ರಾವಣ—(ಸುತ್ತಲೂ ನೋಡಿ) ಅಹಾ, ಚಿತ್ತವು ಪರಿಚಿತವಾದುದಕ್ಕೇ ಪರವಶವಾಗುತ್ತದೆ! ಇಲ್ಲಿ ಕುಳಿತಿದ್ದರೂ ಸೀತೆಯು ರಾಮತಪೋವನವನ್ನೇ ಚಿಂತಿಸುತ್ತಿರುವಳು. ಇಲ್ಲಾದರೋ—

ಇವೆ ಮೇಣ್ ಸ್ವರ್ಗದೊಳಿರ್ದ ಬಳ್ಳಿಯಿನಿತುಂ, ಮಂದಾಕಿನೀವಾರಿಯಿಂ
ಸುರಪಂ ಸುಮ್ಮನೆ ನೋಡುತಿರ್ಪಿನಮಿವಂ ಕಿಳ್ತಿಂ ಗಡಾ ಬೇರ್ಗಳಿಂ ।
ಇದೊ ತಾಂ ಚುಂಬಿಪುದಿಲ್ಲಿ ಹಂಸಮಿಥುನಂ ಹೇಮಾಂಬುಜಂ ಕಾಣಿಸಲ್
ಇದೊ ಕಾಣಲ್ ತಳಿರಿಲ್ಲಿ ಕೋಕಿಲಕುಲಂ ಮತ್ತಂ ವಲಂ ಪಾಡುಗುಂ ||೨೪||

ವರ್ಷವರ—(ಸ್ವಗತ) ದುಂಬಿವಿಂಡು ಸಂಪಿಗೆಯ ಪರಿಮಳವನ್ನು ನೋಡುವಂತೆಯೇ ಸೀತೆ ರಾವಣನ ವೈಭವವನ್ನು ನೋಡುತ್ತಿರುವಳು !

ರಾವಣ—(ಕಾಮಾವೇಶವನ್ನು ಲಕ್ಷಿಸಿ)

ಅಸುಗೆಯ ಮಾವಿನ ಮಂಜರಿಯಂಬಿಂ
ದಾವನು ಜನಗಳ ಸೀಳುವನೋ ;
ಆವನೇ ಮದನನು ಸುರತರುಪೂಗಳು
ದೊರೆಯಲ್ಕಿನ್ನೇಗೈಯುವನೋ ? ||೨೫||

ವರ್ಷವರ, ಸೀತೆ ಶಿಂಶಪಾವೃಕ್ಷದ ಬಳಿಯಿರುವಳಲ್ಲವೆ ?

ವರ್ಷವರ—ಹೌದು, ಪ್ರಭುವೆ.

ರಾವಣ—ಸೀತೆಯಾದರೋ, ನಾನು ನೋಡಿದರೆ—

ಕಣ್ಣ ತಿರುಹುವಳೆನ್ನ ನೀಳ್ಕರಿಸುತ್ತೆ, ಕೈಯಿಂ ಕಿವಿಯನು
ಮುಚ್ಚಿಕೊಳ್ವಳು ಸವಿಯ ಮಾತನು ನಾನು ನುಡಿದೊಡೆ ತಡೆಯದೆ ;
ನಾನು ಕೈಮುಗಿಯುತ್ತೆ ನಿಂತಿರೆ ರಾಮನಿಗೆ ಮೊರೆಯಿಡುವಳು,
ಇಂತು ದಿನದಿನ ಕಳೆವುದರಿಯೆನು ಇವಳನೊಲಿಸುವ ಪರಿಯನು. ||೨೬||

(ಶಿಂಶಪಾವೃಕ್ಷದ ಬಳಿಯಲ್ಲಿ ಸೀತೆ, ಬಳ್ಳಿಗಳ ಮರೆಯಲ್ಲಿ ಅಡಗಿರುವ ಮಂಡೋದರಿ, ಚೇಟಿ--ಇವರ ಪ್ರವೇಶ.)

ಸೀತೆ—ಅಬ್ಬಾ, ಈ ರಾಕ್ಷಸಜಾತಿ ಎಷ್ಟು ದಯಾಶೂನ್ಯ !

ಮಂಡೋದರಿ—ಚೇಟಿ, ಇದೋ ಮಹಾರಾಜ ! ನಾವು ಯೋಚಿಸಿದ್ದನ್ನು ಈಗ ನೋಡುವಂತಾಗಿದೆ.

ರಾವಣ—(ಸಮೀಪಿಸಿ) ಎಲಾ ದೇವಿ !

ಸೀತೆ—(ಸ್ವಗತ) ಈ ಪಾಪಿಯು ಏನು ಹೇಳುವನೋ !

ರಾವಣ—ದೇವಿ,

ಮಿಂದು ಗಂಗಾಜಲದೆ, ಸುರತರುವಿಂದೆ ಕಾಣಿಕೆವಡೆಯುತೆ,
ತುಂಗ ಕೈಲಾಸಾದ್ರಿಯಲ್ಲಿಯೊ ರಮ್ಯ ನಂದನವನದೊಳೊ ;
ಸುದತಿ, ತಪದಿಂ ಸುಲಭವಲ್ಲದ ನಾಕಲಕ್ಷ್ಮಿಯ ಸೇವಿಸು
ಸ್ವರ್ಗಮಾರ್ಗಕೆ ಅಡ್ಡದಗುಳಿಯು ನಿನ್ನ ಪಾತಿವ್ರತ್ಯವೆ ! ||೨೭||

ಸೀತೆ—ನಿನ್ನ ಸ್ವರ್ಗಮಾರ್ಗ ಹಾಳಾಗಲಿ. ಆರ್ಯಪುತ್ರನ ಅನುವರ್ತಿನಿಯಾದ ನಾನು ನರಕಕ್ಕೇ ಹೋಗಬಯಸುತ್ತೇನೆ.

ಮಂಡೋದರಿ—ದೇವಿ, ನಿನಗಾಗಿ ನನ್ನ ಅಂತಃಪುರವನ್ನೆಲ್ಲ ಪರಿತ್ಯಾಗ ಮಾಡುತ್ತೇನೆ.

ಮಂಡೋದರಿ—ನೆನಪಿರಲಿ, ಈ ಮಾತು ಮಹಾರಾಜನಿಗೆ ನೆನಪಿನಲ್ಲಿರಲಿ !

ಸೀತೆ—ಅಲ್ಲ, ಬರಿಯ ಅಂತಃಪುರವನ್ನಷ್ಟೇ ಅಲ್ಲ ; ನನಗಾಗಿ ನಿನ್ನ ಪ್ರಾಣವನ್ನೂ ಪರಿತ್ಯಾಗ ಮಾಡಬೇಕಾಗುತ್ತದೆ !

ಮಂಡೋದರಿ—ಅಬ್ಬಾ, ಮನುಷ್ಯಜಾತಿಯ ಮಾತು ಎಷ್ಟು ಕಠೋರ !

ರಾವಣ—ನಿಜವಾಗಿಯೂ ಕಾಮನು ನನ್ನ ಪ್ರಾಣವನ್ನು ಹರಣಮಾಡುತ್ತಿದ್ದಾನೆ.

ಸೀತೆ—ಅಲ್ಲ, ಅಲ್ಲ, ಕಾಮನಿಗಿಂತ ಸುಂದರನಾದ ಆರ್ಯಪುತ್ರ !

ರಾವಣ—(ಗಟ್ಟಿಯಾಗಿ ನಗುತ್ತಾ) ಹಹಹಾ !

ಕ್ಷತ್ರಿಯವಂಶದ ತಾಪಸನೆನಿಪಗೆ ಯುದ್ಧದೊಳಾಯುಧ ಹುಲ್ಲೆನಲು
ರಾವಣನೆಂದೂ ತಡೆಯಲ್ಕಾರನು ಅಂಥದನೆಂಬುದು ದಿಟವಹುದು ;
ನಾನಂದೆದೆಯೊಳಗಾಂತೆನು ಕಿಸಲಯದಂತೆಯೆ ಕೋಮಲವಾಗಿರಲು
ಕ್ಷಿತಿಧರಪತಿಗಳ ಪಕ್ಷವ ಸೀಳಿದ ಶಕ್ರನ ವಜ್ರಾಯುಧವನ್ನು. ॥೨೮॥

ಮಂಡೋದರಿ—ಮಹಾರಾಜನು ಮುಂದೇನು ಮಾಡುವನೋ ! ಇವಳು ಯಾವ ಅನುನಯಕ್ಕೂ ಒಲಿಯುತ್ತಿಲ್ಲ.

ರಾವಣ—ದೇವಿ, ಇದೋ ಕೈಮುಗಿದೆ !

ಗಂಧರ್ವ ಸುರದೈತ್ಯ ಯಕ್ಷನಾಗಾದಿಗಳ
ಸುಂದರಿಯರಿರುವೆನ್ನ ಅಂತಃಪುರವು ;
ಸಕಲವೂ ಸುಂದರಿಯೆ ನಿನ್ನ ಬೆಸಗೈಯಲ್ಕೆ
ಕಾಯುತಿದೆ ನೀನೆನಗೆ ಒಲಿವುದಾಗೆ. ॥೨೯॥

ಮಂಡೋದರಿ—ನಾನೇನೋ ಇವಳಿಗೆ ಅದನ್ನೂ ಮಾಡುವೆನು. ಆದರೆ ಬೇರೆಯವರ ವಿಷಯವನ್ನು ನಾನು ಕಾಣೆ.

ಚೇಟಿ—ಭಟ್ಟಿನಿ, ನೋಡು, ನೋಡು. ಎಲ್ಲ ಕಡೆಗಳಲ್ಲಿಯೂ ಕೈ ಜೋಡಿಸಿರುವ ಪ್ರಭು ಅಲ್ಲಲ್ಲಿ ಅರೆಬಿರಿದ ಪದ್ಮಗಳಿರುವ ಮಹಾಸಮುದ್ರದಂತೆ ಆಗಿದ್ದಾನೆ !

ಮಂಡೋದರಿ—ತನ್ನ ಆಶಾಭಂಗದಿಂದ ಮಹಾರಾಜನು ಈ ಪತಿವ್ರತೆಯ ಮೇಲೆ ಸಿಟ್ಟಾಗದೆ ಇರಲೆಂದು ಹಾರೈಸುತ್ತೇನೆ.

ವರ್ಷವರ—(ಸ್ವಗತ) ನನಗೆ ಹೀಗೆನಿಸುತ್ತದೆ—

ಶರಪಾಂಡು ತನುಲೇಖೆ ಶಶಿಕಲೆಯವೋಲಿವಳು
ಶೋಭಿಪಳು ಮಿಥಿಲಾಪತಿಯ ಸುತೆಯು ;
ಈ ನಿಬದ್ಧಾಂಜಲಿಯು ಶೋಭಿಪುದು ಕಮಲಗಳು
ಮುಗಿದ ಕಮಲಾಕರದ ತೆರದೊಳಿಂದು. ॥೩೦॥

ರಾವಣ—ದೇವಿ, ಇಗೋ ಅನುನಯಸರ್ವಸ್ವವಾದ ಅಂಜಲಿಯಿದು !
(ನಮಸ್ಕರಿಸುವನು)

ಸೀತೆ—ಛೀಃ, ತೊಲಗು. (ಕಾಲಿಂದ ದೂರಕ್ಕೆ ಕೊಡಹುವಳು.)

ಮಂಡೋದರಿ—ಇವಳು ದಿಟ್ಟೆಯೇ ಸರಿ. ಮಹಾರಾಜನನ್ನು ಕೆಸರಿನಂತೆ ಕಾಲಿಂದ ಕೊಡಹಿದಳು ! 'ಪೃಥ್ವಿಯ ಮಗಳೇ ಸೀತೆ, ಪದ್ಮನಾಭನೇ ರಾಮ' ಎಂಬ ಜನಪ್ರವಾದವು ಈಗ ಸತ್ಯವೆಂದೇ ಆಯಿತು !

ವರ್ಷವರ—ರಾಜಪುತ್ರಿ, ಮಹಾರಾಜನ ಪ್ರಣಾಮವನ್ನು ಉಪೇಕ್ಷೆ ಮಾಡುವುದೆ ?

ವಿಪ್ರರಾರಿಗೆ ಪೂಜೆಗೈಯುತೆ ನಮಿಸಿ ಶುಭವನು ಪಡೆವರಾ-
ಯಮ ಕುಬೇರ ಪುರಂದರಾದಿ ಸಮಸ್ತದೇವನಿಕಾಯವು ;
ತೊರೆದು ಗರ್ವವನಾರ್ಗೆ ಕೈಗಳ ಮುಗಿಯುತಿರ್ಪುದೊ ಆತನೇ
ನೋಡು ಸುಂದರಿ ತಲೆಗಳಿಂದಲೆ ನಿನಗೆ ನಮಿಸುತ್ತಿರ್ಪನು ॥೩೧॥

ಸೀತೆ—ಇದು ಪ್ರಣಾಮವಲ್ಲ ; ನಿರ್ನಾಮವೇ ಇದು.

ವರ್ಷವರ—ಇವಳು ಅನುನಯಕ್ಕೆ ಒಲಿಯುವುದಿಲ್ಲ ! (ಮುಖತಿರುಗಿಸಿಕೊಂಡು ನಿಲ್ಲುವನು.)

ರಾವಣ—ದೇವಿ, ನಿನ್ನ ಪಾದಗಳೇ ನನಗೆ ಶರಣ.

ಸೀತೆ—ಆರ್ಯಪುತ್ರನ ಪಾದಗಳಿಗೆ ಶರಣಾಗು !

ರಾವಣ—(ರೋಷದಿಂದ ತಟ್ಟನೆ ಎದ್ದು) ಏನು, ಏನು ?—

ನಾಲ್ಕುವರ್ಣಗಳಿಂದೆ ಕೊಂಡು ಷಷ್ಠಾಂಶವನು
ಭೋಗಿಸುತ ಷಾಡ್ಗುಣ್ಯಪರರ ನೃಪರ
ಸೂಳೆಯಲ್ಲವೆ ನಿನ್ನ ಜನನಿ ವಿಶ್ವಂಭರೆಯು
ನಿನಗೇಕೆ ಚಾರಿತ್ರ ಹದಿಬದೆಯರ ? ॥೩೨॥

(ಎಲ್ಲರೂ ಭಯಗೊಳ್ಳುವರು)

ಸೀತೆ—ಇದು ನನಗೆ ಗೊತ್ತಿಲ್ಲ.

ರಾವಣ—ನನ್ನ ಚಂದ್ರಹಾಸವೆಲ್ಲಿ ?

ಸೀತೆ—ಇದು ಲಾಭವೇ ಸರಿ. ಆರ್ಯಪುತ್ರನ ಪಾದಮೂಲವೇ ನನ್ನ ಪ್ರಾಣಕ್ಕೆ ಗತಿ !

ಮಂಡೋದರಿ—ಅಯ್ಯೋ, ಹಾಗಿದ್ದವಳು ; ಇವಳು ನಿಜವಾದ ಪತಿವ್ರತೆ. ನನ್ನ ಪ್ರಾಣವನ್ನಾದರೂ ತೆತ್ತು ಮಹಾರಾಜನನ್ನು ಸ್ತ್ರೀಹತ್ಯಾ ದೋಷದಿಂದ ತಪ್ಪಿಸುವೆನು.

(ಬೇಗ ಬಂದು ಇಬ್ಬರ ನಡುವೆ ನಿಲ್ಲುವಳು.)

ಮಂಡೋದರಿ—ಮಹಾರಾಜನಿಗೆ ಜಯವಾಗಲಿ !

ರಾವಣ—ಓಹೊ, ಇವಳು ಮಯನ ಮಗಳಾದ ಮಂಡೋದರಿ ! ನನ್ನ ರಾಣಿ !

(ತಲೆತಗ್ಗಿಸುವನು)

ಮಂಡೋದರಿ—ಮಹಾರಾಜ, ನಿನ್ನ ಕತ್ತಿಗೆ ಇವಳ ಗಂಡನಾದ ರಾಮನು ತಾನೆ ಯಾವ ಲೆಕ್ಕ ? ಅಲ್ಲದೆ, ಇವಳು ನಿನ್ನ ಸೆರೆಯಾಳು. ನೀನು ಅಲಕ್ಷ್ಯಮಾಡಿದರೆ ತಾನಾಗಿಯೇ ಪ್ರಾಣ ಬಿಡುವಳು.

ವರ್ಷವರ—(ಸ್ವಗತ)

ಭೂಪತಿಯ ಸತಿಯಿವಳು ವಸುಧೆಯಂತಿಹಳೆನಲು
ವಾರಾಶಿಯಂದದಲಿ ಎನ್ನೊಡೆಯನಿಹನು ;
ಇವರಿರ್ವರಾ ನಡುವೆ ನಿಂತಿರುವ ಮಯಸುತೆಯು
ಭೂಮಿಯೆಲ್ಲೆಯ ಕಾಯ್ವ ತೀರದಂತಿಹಳು ||೩೩||

ನನಗೂ ಇದೇ ಸಮಯ. (ಪ್ರಕಾಶ) ದೇವ .... ನೀನು ಕತ್ತಿಯನ್ನು ಕೊಳ್ಳುವುದೆ ?—

ಅಮರಾನರ್ಘವ ಕಂಡೊಡಮಾಂತನೆ
ಉರಿಯುವ ಚಕ್ರವನಾ ಹರಿಯು ;
ಅಥವಾ ಬಿಲ್ಲನು ಹರ ಬಾಗಿಸಿದನೆ
ತಕ್ಷಕಮೌರ್ವಿಯನೇರಿಸುತೆ ? ||೩೪||

ರಾವಣ—ಇದು ದಿಟವೇ.

(ನೇಪಥ್ಯದಲ್ಲಿ)

"ಸ್ವಾಮಿಗೆ ಜಯವಾಗಲಿ ! ಜಯ ಮಹಾರಾಜ ! ಜಯ ಲಂಕೇಶ್ವರ ! ಜಯ ದೇವ ! ಜಯ ಭದ್ರಮುಖ ! ಹತ್ತು ಗಂಟೆಯಾಯಿತು. ಸ್ನಾನದ ಸಮಯ ಮೀರುವುದು ! (ಶಂಖ, ಭೇರಿಗಳು ಮೊಳಗುವುವು) ಮಹಾರಾಜನು ಇತ್ತ ಬರಬೇಕು !"

ರಾವಣ—ಈಗ ನೀವು ತಡೆಯಾದಿರಿ ! ಇರಲಿ, ಬೆಳಗಾದಮೇಲೆ ನೋಡುವೆನು.

(ಪರಿವಾರದೊಂದಿಗೆ ರಾವಣನ ನಿಷ್ಕ್ರಮ)

ಸೀತೆ—ಆರ್ಯಪುತ್ರನ ಬಗೆಗೆ ನಾನು ನಿರಾಶಳಾಗಿದ್ದೇನೆ. ಈ ರಾಕ್ಷಸನ ಕೈಯಲ್ಲಿ ಸಾಯುವುದು ಪಾಪವೇ. ಆದ್ದರಿಂದ ಆರ್ಯಪುತ್ರನ ಧ್ಯಾನ ಮಾಡುತ್ತಾ ನಾನೇ ಪ್ರಾಣವನ್ನು ಬಿಡುವೆನು ! (ನೋಡಿ) ಅದೃಷ್ಟ ವಶದಿಂದ ರಾಕ್ಷಸಿಯರೆಲ್ಲರೂ ಮಲಗಿ ನಿದ್ರಿಸುತ್ತಿರುವರು. ಇರಲಿ. ಅಯ್ಯೋ ! ರಾಕ್ಷಸನ ತಲೆಯ ಸೋಂಕಿನಿಂದ ಮೈಲಿಗೆಯಾದ ಕಾಲುಗಳನ್ನು ಬಳಿಯಲ್ಲೇ ಇರುವ ಪುಷ್ಕರಿಣಿಯಲ್ಲಿಳಿದು ತೊಳೆದುಕೊಂಡು ಆಮೇಲೆ ನನ್ನ ದುಃಖದಿಂದ ಬಿಡುಗಡೆಹೊಂದುವೆನು.

(ನಿಷ್ಕ್ರಮ)

**ಇಲ್ಲಿಗೆ ಐದನೆಯ ಅಂಕ ಮುಗಿದುದು.**

# ಆರನೆಯ ಅಂಕ

(ಉಂಗುರವನ್ನು ಹಿಡಿದ ಹನುಮಂತನ ಪ್ರವೇಶ)

ಹನುಮಂತ—ಈಗ—

ದಾಂಟಿ ನಾಗಾಂಗನೆಯರಾಡುವ ಜಲಧಿಸಖ ಮೈನಾಕನಂ
ಸೆಳೆದು ವೇಗದಿನಭ್ರಜಾಲವ ಬಾನೆ ಕಳಚಿದ ಪರಿಯೆನಲ್ ;
ಲಂಕೆಗೈದಿಹೆನೆನ್ನ ತಂದೆಯ ಜವನ ಕಾಣುತೆ ವಿಸ್ಮಿತಂ
ರಾಮ ದೇವಿಗೆ ಕಳಿಸಿದಂಬೆನಲಾನು ಪಿಡಿದುಂಗುರವನು ||೧||

ಗೃಧ್ರರಾಜನು ಹೇಳಿದ ಪ್ರಕಾರ ದೇವಿಯು ಶಿಂಶಪಾವೃಕ್ಷದ ಬಳಿ ಇಲ್ಲಿ ಉದ್ಯಾನದಲ್ಲಿರುವಳಂತೆ ! ಆ ಉದ್ಯಾನವಿರುವುದು ಯಾವ ಕಡೆ ? ಇರಲಿ, ಹುಡುಕಿ ನೋಡುವೆನು. (ನಡೆಯುತ್ತಾ, ನೋಡಿ) ಅಹಾ, ರಾಕ್ಷಸನ ನಗರವು ಎಷ್ಟು ರಮಣೀಯವಾಗಿದೆ ! ಇದೂ ಸರಿಯೆ—

ಸ್ವರ್ಗದೊಳಾವುವು ಸುಂದರ ವಸ್ತುಗ
ಳಿರ್ಪವೊ ಅವುಗಳನೆಲ್ಲವನು ;
ಅಲ್ಲಿಂದೆತ್ತುತೆ ಬೇರನೆ ಬಿಡದೀ
ರಾವಣನಿಲ್ಲಿಗೆ ತಂದಿಹನು. ||೨||

(ಸೋಂಕನ್ನು ಗುರ್ತಿಸಿ) ಇದೇ ಉದ್ಯಾನವಿರಬೇಕು ! ಏಕೆಂದರೆ—

ಮದಿಸಿರ್ಪಳಿಗಳ ಕಲರವಹರನೆನೆ
ತರುಸುಮಸೌರಭವನು ಸೆಳೆದು,
ಸರಸಿಗಳಲೆಗಳ ಸೋಂಕಿಂ ಶೀತಲ
ನಹ ಮಾರುತನೇ ತಿಳಿಸುವನು. ||೩||

(ನೋಡಿ) ಇದೇ ಉದ್ಯಾನ. ಪ್ರವೇಶಿಸುವೆನು.

(ಪ್ರವೇಶಿಸಿ, ಸುತ್ತಲೂ ನೋಡಿ, ವಿಸ್ಮಯದಿಂದ)

ನೋಡಲ್ ಪಲ್ಲವಮುಂಶುಕಂ ತರುಗೆ, ಪೂ ಮುತ್ತುಂ, ಫಲಂ ವಿದ್ರುಮಂ
ವೈಡೂರ್ಯಂ ದಳಮುಂಕುರಂ ಮರಕತಂ, ಶಾಖಾಗಣಂ ಕಾಂಚನಂ।
ಕಾಡೊಳ್ ಜೀವಿಪ ವಾನರಂಗಮೆನಗಂ ವೃಕ್ಷಂಗಳಜ್ಞಾತಮೀ
ವೃಕ್ಷಂ ನಾಕದ ಸಾರಮಕ್ಕುಮದರಿಂದೇಂ, ಕಾರ್ಯಮಿನ್ನೊಂದಿರಲ್||೪||

ಇಲ್ಲಿಯೇ ಶಿಂಶಪಾವೃಕ್ಷದ ಬಳಿ ದೇವಿಯಿರುವಳೆಂದು ಸಂಪಾತಿ ಹೇಳಿದ್ದು. ಆ ಶಿಂಶಪಾವೃಕ್ಷವೆಲ್ಲಿ? (ನಡೆಯುತ್ತಾ, ನೋಡಿ) ಓ, ಇದೇ ಶಿಂಶಪಾ ವೃಕ್ಷ. (ಹರ್ಷದಿಂದ ಏರಿ, ಸುತ್ತಲೂ ನೋಡಿ, ವಿಷಾದದಿಂದ) ಅಯ್ಯೋ, ಇಲ್ಲಿ ದೇವಿ ಕಾಣಿಸಳು! (ಎಂದು ಮೂರ್ಛೆಹೋಗುವನು, ಮತ್ತೆ ಎಚ್ಚತ್ತು) ರಾಕ್ಷಸನಿಂದೇನಾದರೂ ಹತಳಾದಳೇ? ಅಥವಾ ತಾನೇ ಸಾಹಸಮಾಡಿಕೊಂಡಳೋ? ನಾನು ಸಮುದ್ರವನ್ನು ದಾಟಿದುದು ವ್ಯರ್ಥವಾಯಿತು. ಸುಗ್ರೀವನ ಮನೋರಥವು ನಿಷ್ಫಲವಾಯಿತು. ಏನೆಂದು ಹೇಳಿ ಪ್ರಭುವಿತ್ತ ಈ ಅಭಿಜ್ಞಾನದ ಉಂಗುರವನ್ನು ಅವನಿಗೆ ತಿರುಗಿ ಕೊಡಲಿ? ಸರ್ವಥಾ ದೇವಿಯಿಲ್ಲದೆ ದೇವನು ಜೀವಿಸಲಾರನು; ಬಳಿಕ ಸುಗ್ರೀವ, ಭರತ ಲಕ್ಷ್ಮಣರು, ದೇವಿಯರು. ಈ ಎಲ್ಲ ಅಶುಭಕ್ಕೂ ವಿಫಲನಾಗಿ ಹಿಂದಿರುಗುವ ನಾನೇ ಕಾರಣನಾದಂತಾಗುವುದು. ಸ್ವಾಮಿಗೆ ಸುಳ್ಳನ್ನು ಹೇಳುವಂತೆಯೂ ಇಲ್ಲ. ಆದ್ದರಿಂದ ಯಥಾಶಕ್ತಿ ನನ್ನ ಸಾಹಸವನ್ನು ತೋರಿಸಿ ಯಶಸ್ಸನ್ನು ಗಳಿಸುವೆನು.

(ನೇಪಥ್ಯದಲ್ಲಿ)

'ಭಗವನ್, ಮೃಗಲಾಂಛನ!'

ಹನುಮಂತ—ಇದೇನಿದು. ಕೇಳಿ ನೋಡುವೆನು.

(ಮತ್ತೆ ನೇಪಥ್ಯದಲ್ಲಿ)

'ಇದೋ ಕೈಮುಗಿದಿರುವೆ. ಎಷ್ಟೋ ಕಾಲದ ಮೇಲೆ ಕಣ್ಣಿಗೆ ಕಂಡಿರುವೆ'.

ಹನುಮಂತ—ಇದು ವಿಲಾಪ. ಇಲ್ಲಿಯೇ ಪೊಟ್ಟರೆಯಲ್ಲಿ ಅಡಗಿಕೊಂಡು ವೃತ್ತಾಂತವನ್ನು ಸರಿಯಾಗಿ ತಿಳಿದುಕೊಳ್ಳುವೆನು. (ಹಾಗೆ ಮಾಡುವನು) ಇವಳೇ ದೇವಿ. ಅಯ್ಯೋ ಇವಳಿಗೆ—

ನೆಲದೊಳು ಹೊರಳುತ್ತಡಿಗಡಿಗಡ್ಡಿದ
ರಜವೆ ಕಪೋತದ ಕೊರಳಿನೊಲು;
ಕಂಬನಿ ಕೂಡಿರೆ ಗಂಧದೊಲೆಸೆವುದು
ಪಾಂಡುರಕುಚಗಳ ಬಳಿಯೊಳಗೆ. ||೫||

ಇವಳ ವಿಲಾಪವಚನವು ಸ್ವಾಮಿಯ ಕಿವಿಗಳಿಗೆ ರಸಾಯನವಾಗುವುದರಿಂದ ಕ್ಷಣಕಾಲ ಕೇಳುವೆನು. (ಮೌನದಿಂದಿರುವನು)

(ವಿಲಾಪಮಾಡುತ್ತಿರುವ ಸೀತೆಯ ಪ್ರವೇಶ)

ಸೀತೆ—ಚಂದ್ರನೆ, ನಿನ್ನನ್ನೇ ಈಗ ನಾನು ನಿಂದಿಸುತ್ತಿರುವುದು. ಕ್ಷತ್ರಿಯರಿಗೆ ನೀನು ಬಂಧುವೆಂದು ಹೇಳುತ್ತಾರೆ. ಆರ್ಯಪುತ್ರನಿಗೆ ನೀನು ಸದೃಶನೆಂದು ಲೋಕವೇ ನುಡಿಯುತ್ತದೆ. ಇಲ್ಲ, ಇಲ್ಲ. ನಾನು ಹುಚ್ಚಿ. ನೀನು ದಿನದಿನವೂ ಬೇರೊಬ್ಬಳಿಂದ ಆಲಿಂಗಿತನಾಗುವೆ. ಆರ್ಯಪುತ್ರನು ಮಂದಭಾಗಿನಿಯಾದ ನನ್ನೊಬ್ಬಳಿಂದ ಮಾತ್ರ ಆನಂದಿಸುವನು. ಅಥವಾ, ಇದೆಲ್ಲವೂ ಹಾಗಿರಲಿ. ನೀನು ಇತ್ತ ನನ್ನನ್ನೂ ಅತ್ತ ಆರ್ಯಪುತ್ರನನ್ನೂ ನೋಡುವೆ. ಆದರೆ ಏನನ್ನೂ ಹೇಳದೆ ಉದಾಸೀನನಂತೆ ಹೋಗುವೆ !

ಹನುಮಂತ—ಇವಳ ವಿಲಾಪ ಮುಗಿದ ಮೇಲೆ ಕಾಣಿಸಿಕೊಳ್ಳುವೆನು. (ಮೌನ ತಾಳುವನು)

ಸೀತೆ—ಸಪ್ತಋಷಿಗಳೆನ್ನುವವರು ಇವರೇ ! ರಘುವಂಶಕ್ಕೆ ಪುರೋಹಿತನಾದ ವಸಿಷ್ಠನೇ ಇವನು. ಪತಿವ್ರತೆಯರಿಗೆಲ್ಲ ನಿದರ್ಶನವೆನಿಸಿರುವ ಅರುಂಧತೀ ದೇವಿಯೇ ಈಕೆ. ಭಗವತಿ, ಇದೇ ನಿನ್ನ ಕೆಲಸವೆ ? ರಾಕ್ಷಸದೇಶದಲ್ಲಿ ಸಿಕ್ಕಿಬಿದ್ದ ನನಗೆ ಪ್ರತೀಕಾರವೇನೆಂದು ಹೇಳುವುದೂ ಇಲ್ಲ ? ಸರ್ವಥಾ ನಿನ್ನ ದರ್ಶನಫಲವನ್ನು ಈಗ ಸುಳ್ಳಾಗಿಸುವೆನು !

ಹನುಮಂತ—ಸ್ವಾಮಿನಿ, ನಾನು ತಡೆಯುವೆನು.

ಸೀತೆ—ಧ್ವನಿಯೆಲ್ಲಿಂದ ಬಂದಿತು ? (ಮತ್ತೊಂದು ಕಡೆ ನೋಡುತ್ತಾ) ಓ, ಈ ಚಕ್ರವಾಕಸ್ತ್ರೀಯನ್ನು ರಜನಿಯೆಂಬ ರಾಕ್ಷಸನು ಪತಿಯಿಂದಗಲಿಸಿದ್ದಾನೆ. ಅವಳೂ ನನ್ನಂತೆ ವ್ಯರ್ಥವಾಗಿ ಗೋಳಿಡುತ್ತಿರುವಳು.

ಹನುಮಂತ—ಸ್ವಾಮಿನಿ, ಇದು ವ್ಯರ್ಥವಲ್ಲ. ಪೂಜ್ಯಪಾದನಾದ ಪ್ರಭು ರಾಮನೇ ನಿನ್ನ ಈ ನುಡಿಗಳನ್ನು ಕೇಳುವನು.

ಸೀತೆ—ಇದೇನು, ನಾನು ನಿಂದಿಸಿದ ದೇವತೆಗಳ ಅನುಗ್ರಹವೇನು ? ಅಥವಾ ರಾಕ್ಷಸನು ಪ್ರಯೋಗಿಸುತ್ತಿರುವ ಮತ್ತೊಂದು ಮಾಯೆಯೋ ?

ಹನುಮಂತ— ಸ್ವಾಮಿನಿ, ಸಂಶಯವನ್ನು ಬಿಡು. ನಾನು ಮನುವಂಶಪ್ರದೀಪನಾದ ಆರ್ಯರಾಮನ ದೂತ.

ಸೀತೆ—(ಸ್ವಗತ) ಇವನ ಮಾತು ಮಧುರವಾಗಿದೆ. ರಾಕ್ಷಸಜಾತಿಯವನಲ್ಲ. ಹುತ್ತದಿಂದ ಹಾರವೆಂದಾದರೂ ಹುಟ್ಟುವುದೆ ?

ಹನುಮಂತ—ಸ್ವಾಮಿನಿ, ಇದೋ ನಿನಗೆ ಕೈಮುಗಿದೆ !

ಸೀತೆ—ನಿನ್ನ ರೂಪವನ್ನು ತೋರಿಸು. ಪೊಟರೆಯಿಂದ ಹೊರಗೆ ಬಾ.

ಹನುಮಂತ—ಸ್ವಾಮಿನಿಯ ಅಪ್ಪಣೆ. (ಇಳಿದು ಬಂದು ನಮುಸ್ಕರಿಸುವನು)

ಸೀತೆ—ಓ, ಇವನು ವಾನರ. ಪ್ರಾಯಃ ರಾಕ್ಷಸನು ಈ ರೂಪವನ್ನು ತಳೆಯುವುದಿಲ್ಲ.

ಹನುಮಂತ—(ನಮುಸ್ಕರಿಸಿ)

ವಿಮಲ ಜನಕನ ನೀನು ಪಾವನಂಗೊಳಿಸುತಿಹೆ
ರಾಜರ್ಷಿತಿಲಕನನು ಪತಿ ರಾಮನನ್ನು ;
ವಂದ್ಯೆಯಾಗಿಹೆ ಜನಕೆ ದಿವ್ಯಗಂಗೆಯ ತೆರದೆ
ಹಿಮಶೈಲ ಜಲಧಿಗಳ ಮಹಿಮೆಯನು ಮೆರೆವ. ||೬||

ಸೀತೆ—(ಸ್ವಗತ) ಈ ಸವಿನುಡಿಗಳ ಸೃಷ್ಟಿಕರ್ತನು ಯಾರಿರಬಹುದು. ಇರಲಿ, ಇವನನ್ನೇ ಕೇಳುವೆನು. ಆಮೇಲೆ ಇವನನ್ನು ಪರೀಕ್ಷಿಸಲು ಆಶ್ಚರ್ಯ ಚೂಡಾಮಣಿಯ ಪ್ರಮಾಣವಿದ್ದೇ ಇದೆ. (ಪ್ರಕಾಶ) ವಿವರವಾಗಿ ಹೇಳು—ನೀನಾರು, ಯಾವ ರೀತಿ ನಿನಗೂ ಆರ್ಯಪುತ್ರನಿಗೂ ಸಂಪರ್ಕವುಂಟಾಯಿತು ?

ಹನುಮಂತ—ಸ್ವಾಮಿನಿ, ಕೇಳು. ನಾನು ವಾಯುದೇವನ ಮಗ, ಸುಗ್ರೀವನ ಕಿಂಕರ. ಹೆಸರು ಹನುಮಂತ.

ಸೀತೆ—ಮುಂದೆ ?

ಹನುಮಂತ—ಸ್ತ್ರೀನಿಮಿತ್ತವಾಗಿ ಮತ್ತು ರಾಜ್ಯನಿಮಿತ್ತವಾಗಿ ಆ ಸುಗ್ರೀವನಿಗೂ ಅವನಣ್ಣ ವಾಲಿಗೂ ವೈರ ಬೆಳೆಯಿತು.

ಸೀತೆ—ಆಮೇಲೆ ?

ಹನುಮಂತ—ಆಗ ವಾಲಿಭಯದಿಂದ ಸುಗ್ರೀವನು ಚತುರಂತಕ್ಷಿತಿಯನ್ನೆಲ್ಲ ಜೋಟುದ್ದವೋ ಎನ್ನುವಂತೆ ಸುತ್ತಿದನು.

ಸೀತೆ—ಆಮೇಲೆ ?

ಹನುಮಂತ—ಬಳಿಕ ಮುನಿಶಾಪದ ಬಲದಿಂದ ವಾಲಿಯ ಭಯವಿಲ್ಲದ ಮಾಲ್ಯವಂತವೆಂಬ ಪರ್ವತವನ್ನು ಬಂದು ಸೇರಿದನು.

ಸೀತೆ—ಬಳಿಕ ?

ಹನುಮಂತ—ಆ ಸಮಯದಲ್ಲಿ ಈ ಅಲ್ಪಾಯುಷ್ಯನಾದ ರಾಕ್ಷಸನ ಮೋಸದಿಂದ ಸ್ವಾಮಿನಿಗೆ ಕಷ್ಟವೊದಗಿತು.

ಸೀತೆ—ಅನಂತರ ?

ಹನುಮಂತ—ಅನಂತರ, ರಾಮದೇವನು ಧೀರನಾದರೂ ಕಾರಣದ ಬಲುಮೆಯಿಂದ ಅಧೀರನಾಗಿಬಿಟ್ಟನು.

ಸೀತೆ—ಆಮೇಲೆ ?

ಹನುಮಂತ—ಆಮೇಲೆ ಹತಾಯುಷನಾದ ಜಟಾಯುವಿನ ಮಾತನ್ನು ಕೇಳಿ ನಿನ್ನನ್ನು ಹುಡುಕುತ್ತಾ ತಮ್ಮನೊಡನೆ ಬೆಟ್ಟದಿಂದ ಬೆಟ್ಟಕ್ಕೂ ಕಾಡಿಂದ ಕಾಡಿಗೂ ಎಡೆಬಿಡದೆ ಕಾಲ್ನಡೆಯಿಂದಲೆದು ಅವನ್ನು ಪಾವನಗೊಳಿಸಿದನು.

ಸೀತೆ—ಆಮೇಲೆ ?

ಹನುಮಂತ—ಆಗ ಒಂದು ದಟ್ಟಡವಿಯಲ್ಲಿ ವಾಲಿಯ ಚಾರರನ್ನು ಪರೀಕ್ಷಿಸಲೆಂದು ಸುಗ್ರೀವನ ಅಪ್ಪಣೆಯಂತೆ ನಾನು ಹೋಗುತ್ತಿರುವಾಗ ದೇವನನ್ನು ಕಂಡೆನು.

ಸೀತೆ—(ಹರ್ಷದಿಂದ) ನಿಜವಾಗಿ ನಿನ್ನ ಕಣ್ಣುಗಳಿಂದಲೇ ಕಂಡೆಯಾ ?

ಹನುಮಂತ—ಹೌದು, ಸ್ವಾಮಿನಿ.

ಸೀತೆ—ಹೇಳು, ಆರ್ಯಪುತ್ರನು ಹೇಗಿರುವನು ?

ಹನುಮಂತ—ಸ್ವಾಮಿನಿಯು ಕೇಳಬೇಕು.

ಸೀತೆ—ಗಮನವಿಟ್ಟು ಕೇಳುತ್ತಿದ್ದೇನೆ.

ಹನುಮಂತ—ಪೂಜ್ಯಪಾದನಾದ ರಾಮನ—

ಕಾಲುಗುರ್ಗಳುನ್ನತವು
ಶಂಖಚಕ್ರಾಂಕಿತವು ಪಾದತಳವು,
ಸ್ಥಿರವಿಹವು ಜಂಘೆಗಳು
ಸಣ್ಣ ನಡು ಮಣಿಶಿಲೆಯ ಮಂಡಲದೊಲು,
ಎದೆಯು ಶ್ರೀವತ್ಸಾಂಕ
ತೋಳೆರಡು ನೀಳ್ದಿಹವು ಭುಜಗವೆನಲು,
ಕಣ್ಣು ತಾವರೆಯೆನಿಸೆ,
ಮುಖ ಪೂರ್ಣಚಂದ್ರಮನ ಸರಿಯೆನಿಪುದು. ॥೭॥

ಸೀತೆ—ಈಗ ಆರ್ಯಪುತ್ರನನ್ನು ಕಣ್ಣಿಂದ ಕಂಡಂತೆ ಆಗುತ್ತಿದೆ. ಆಮೇಲೆ?

ಹನುಮಂತ—ಆಗ ದೇವನು—

ಕೈರವನೇತ್ರೆಯೆ ಪೋದೆಯದೆಲ್ಲಿಗೆ ಎಂದಾ ಬನದೊಳು ಗೋಳಿಡುವ
ಮನಸಿಜಪರವಶನಾದಾ ದೇವನು ರಾಮನು ಕಂಡನು ಕಂಗಳಿಗೆ;
ಕಂಬನಿಯಿಂದಲೆ ನೆನೆದಾ ನಿನ್ನಯ ಮಣಿಮಯ ನೂಪುರವನ್ನಿರದೆ
ಕಡಗದ ತಾಣದೊಳಂತೆಯೆ ಮುಡಿಯೊಳು ಬಿಡದದನಿಡುತಲಿ
ಶೋಕಿಸುತೆ. ॥೮॥

ಸ್ವಾಮಿನಿ, ಹೆಚ್ಚೇನು ಹೇಳಲಿ? ನಿನ್ನ ಚರಣಾಭರಣವೇ ದೇವನಿಗೆ ಸರ್ವಾಭರಣವೂ ಆಯಿತು.

ಸೀತೆ—ನಿನಗೆ ಇದು ತಿಳಿದುದು ಹೇಗೆ?

ಹನುಮಂತ—ನನಗೆ ಪ್ರತ್ಯಕ್ಷವಲ್ಲದ್ದಕ್ಕೆ ಕುಮಾರ ಲಕ್ಷ್ಮಣನೇ ಪ್ರಮಾಣ.

ಸೀತೆ—ಸರಿಯೆ. ಆಮೇಲೆ?

ಹನುಮಂತ—ಆಗ—

ಮರಕತಕಾಂತಿಯು, ಮುದಿಸಿದ ಭೃಂಗಗಳಾಡುವ ತರುಗಳ
ರಾಜಿಗಳು,
ಮೇಲಿಂದುರುಳುವ ನದಿಗಳ ಸೀರಿಂ ಬೆಳಗುವ ಗಿರಿಯ ನಿತಂಬಗಳು,
ಪಥಿಕರ ಸಖರೆನೆ ಪಂಪಾವಾರಿಯ ಮೇಲಿಂದೈತಹ ಗಾಳಿಗಳು
ಚಣಮುಂ ದೇವನ ಬಗೆಯನು ಸೆಳೆಯುವು, ನಿನ್ನಯ ಗುಣಗಳ
ಸೆಳೆದಿರಲು. ॥೯॥

ಸೀತೆ—ಆಮೇಲೆ ?

ಹನುಮಂತ—

ಉಣಿಸನೋಪಂಗೀವ ಚಕ್ರವಾಕಿಯನಂತೆ
ಕಮಲಮಧುವನು ಕುಡಿವ ಮತ್ತಮಧುಪವನು ;
ಬಿಸದೆಸಳ ರುಚಿನೋಳ್ಪ ರಾಜಹಂಸವನವನು
ಬೇಡಿದನು ನಿನಗೊಂದು ಸಂದೇಶಕಂದು ||೧೦||

ಸೀತೆ—ಆಮೇಲೆ ?

ಹನುಮಂತ—

ಕೇಕೆಯಿಂ ಸೋಗೆಗಳ, ಕೇತಕೀಪುಷ್ಪಗಳ
ಸೌರಭವ ತೀಡುವಾ ಮೆಲ್ಲೆಲರಿನಿಂದೆ,
ಮೇಘಮಾಲೆಗಳಿಂದೆ ಕಪ್ಪಾದ ನಿಶಿಗಳೊಳು
ಪ್ರಾಣಸಂಶಯಪದವನಾಂತನವನಂದು. ||೧೧||

ಸೀತೆ—ಅಯ್ಯೋ ! ಆಮೇಲೆ ?

ಹನುಮಂತ—

'ಮನದನ್ನೆ ಮುಳುಗಿದಳು ನೀರಿನೊಳಗೆನಿಸುವುದು
ತನ್ನ ಕರಪಲ್ಲವವನಹ ಚಾಚುತಿಹಳು',—
ಎಂದು ಬೇಗದೆ ಬಂದು ದೇವಿ, ದೇವನು ಅಂದು
ಅರಳಿದರವಿಂದಗಳ ಪಿಡಿದನಡಿಗಡಿಗೆ. ||೧೨||

ಸೀತೆ—ಆಮೇಲೆ ?

ಹನುಮಂತ—ಆಮೇಲೆ ಇನ್ನೊಂದೆಡೆಗೆ ಹೋಗಿ—

ಚೆಲುವ ಚೆಂದಳಿರಿಂದೆ ಹಾಸಿಗೆಯನೇರ್ಪಡಿಸಿ
ನಿನಗೆ ಮುಡಿಸುವೆನೆಂದು ಹೂವನಾಯ್ದು,
'ಪ್ರಾಣಸಮೆ, ವೈದೇಹಿ, ಮಾನಿನಿಯೆ, ಬಾ ಬಾರ'
ಎಂದು ಸಂತೈಸುವನು ಪುಷ್ಪಲತೆಯ. ||೧೩||

ಸೀತೆ—ಇದಿರಲಿ. ವಾಯುಸುತನೆ, ಇದರಿಂದಲೇ ಮಿಕ್ಕ ಹೆಂಗಸರಿಗೆ ಆನಂದವಾಗಬಹುದು. ಆದರೆ ನನಗೆ ಮಾತ್ರ ಇದರಿಂದ ಶೋಕ, ಲಜ್ಜೆಗಳೇ ಜನಿಸುತ್ತವೆ. ಹೇಳು, ಈ ಅಧನ್ಯೆಗಾಗಿ ಆರ್ಯಪುತ್ರನು ಈಗಲೂ ಹಾಗೆಯೇ ಇರುವನೆ ?

ಹನುಮಂತ—ಇಲ್ಲ, ಇಲ್ಲ. ಮಿತ್ರಲಾಭದಿಂದ ದೇವನು ಈಗ ಪ್ರಸನ್ನನಾಗಿರುವನು.

ಸೀತೆ—ಆಪತ್ತಿನಲ್ಲಿ ಒದಗಿರುವ ಮಿತ್ರನಾರು ?

ಹನುಮಂತ—ಆಗ ನಾನು ರಾಮುನನ್ನು ಕಾಡಿನಿಂದ ಕರೆದೊಯ್ದು, ರಾಮುಸುಗ್ರೀವರಿಗೆ ಜೀವದೇಹಗಳಂತಹ ಗೆಳೆತನವುಂಟಾಗುವಂತೆ ನಾನೇ ಮಾಡಿದೆ.

ಸೀತೆ—ಆಮೇಲೆ ?

ಹನುಮಂತ—ಆಮೇಲೆ ಅವನ ಪ್ರಭಾವದಿಂದ ಸುಗ್ರೀವನಿಗೆ ವಾಲಿಭಯವು ನಿಶ್ಶೇಷವಾಯಿತು. ಕಪಿಕರಡಿಗಳ ರಾಜ್ಯಲಕ್ಷ್ಮಿಯು ನಿಖಿಲದಿಙ್ಮಂಡಲ ವ್ಯಾಪಿಯಾಯಿತು. ಅದು ನಿಷ್ಕಂಟಕವಾಗಿ ಸುಗ್ರೀವನಿಗೆ ಬೇರೆ ಪ್ರಯತ್ನವಿಲ್ಲದೆ ಸೇರಿತು.

ಸೀತೆ—ಆಮೇಲೆ ?

ಹನುಮಂತ—ಹೀಗೆ ಇಷ್ಟಾರ್ಥ ಕೈಗೂಡಿದ ಸುಗ್ರೀವನು ಬಳಿಕ ನಿನ್ನ ಅನ್ವೇಷಣೆಯೆಂಬ ಸ್ವಾಮಿಕಾರ್ಯವನ್ನು ಕೈಗೊಂಡನು.

ಸೀತೆ—ಆಮೇಲೆ ?

ಹನುಮಂತ—ಆಮೇಲೆ, ಜನ್ಮಮಾತ್ರದಿಂದ ಹಾಸ್ಯಕರರಾದ, ಕೃತಿಯಿಂದ ದೇವತೆಗಳನ್ನೂ ಮೀರಿಸಿದ, ವಾನರವೀರರನ್ನೂ ಋಕ್ಷಾಧಿಪತಿಗಳನ್ನೂ ನಾಲ್ಕು ದಿಕ್ಕುಗಳಿಗೆ ನಿಬಂಧನೆಮಾಡಿ ಕಳುಹಿಸಿದನು.

ಸೀತೆ—ಆಮೇಲೆ ?

ಹನುಮಂತ—ಈ ದಿಕ್ಕಿಗೆ ಯುವರಾಜನ ನೇತೃತ್ವದಲ್ಲಿ ಅನೇಕ ಋಕ್ಷಾಧಿಪತಿಗಳೂ ನನ್ನಂತಹ ಅಲ್ಪವಾನರರು ಕೆಲವರೂ ಇರುವ ಸೈನ್ಯವನ್ನು ಕಳುಹಿಸಿದನು.

ಸೀತೆ—ಈ ದಿಕ್ಕೇ ಹೆಚ್ಚಿನ ಶಂಕೆಗೆ ಆಸ್ಪದವಾಗಿದ್ದುದು ನಿಜ.

ಹನುಮಂತ—ಆಮೇಲೆ, ಮಿಕ್ಕ ವಾನರವೀರರು ಇದ್ದರೂ ಕೂಡ, ಪ್ರಥಮ ದರ್ಶನದ ಒಂದು ವಿಶ್ವಾಸದಿಂದ ನನ್ನನ್ನು ರಹಸ್ಯವಾಗಿ ರಾಮನು ಕರೆದು ಕೊಟ್ಟನು ಮತ್ತು ನುಡಿದನು.

ಸೀತೆ—(ಹರ್ಷದಿಂದ) ಏನನ್ನು ? ಏನನ್ನು ?

ಹನುಮಂತ—(ಅಡ್ಡಬಿದ್ದು ಉಂಗುರವನ್ನು ಕೊಡುವನು.)

ಸೀತೆ—(ಹರ್ಷದಿಂದ ಸ್ವೀಕರಿಸಿ, ನೋಡುತ್ತಾ) ಇದು ಅದ್ಭುತ ಉಂಗುರ. ಇದನ್ನೇ ತಪೋಧನರು ಕೊಟ್ಟುದು, ಕುಮಾರನು ತಂದುದು.

(ಉಂಗುರವನ್ನು ಹಿಡಿದುಕೊಂಡು ಅಳುವಳು)

ಹನುಮಂತ—ಈ ದೇವಿಯು—

ಒಯ್ಯುವಳು ಮುಡಿಗದನು ವದನದೆಡೆಗಿಡುತಿಹಳು
ಮತ್ತೆ ಮುಟ್ಟಿಸುತಿಹಳು ತೋಳಿಗೆಲ್ಲ ;
ಒಂದೊಂದೆ ಬೆರಳಿಗೂ ಸೇರಿಸುವಳುಂಗುರವ
ನೆಟ್ಟಿಹಳು ನೀರ್ಗಣ್ಣನದರಲ್ಲಿಯೆ. ||೧೪||

ಸೀತೆ—ಇದು ಲೋಕಾಭರಣನ ಆಭರಣ! ಇದು ಶರಾಸನದ ಹೆದೆಯಿಂದ ಒತ್ತಿಸಿಕೊಂಡಿದೆ! ಇದು ರಾಕ್ಷಸರ ಮಾಯೆಯನ್ನು ಬಯಲಿಗೆಳೆಯುತ್ತದೆ! ಇದು ರಾತ್ರಿಗಳಲ್ಲಿ ರತ್ನದೀಪ. ಇದು ಮುಖಾಲಂಕಾರದರ್ಶನಕ್ಕೆ ಆದರ್ಶ.

ಹನುಮಂತ—ದೇವನು ಇವಳಿಗಾಗಿ ಅದಕ್ಕೂ ನೂರ್ಮಡಿ ಉನ್ಮತ್ತನಾದರೂ ಸರಿಯೆ!

ಸೀತೆ—ಉಂಗುರವೆ,ಈಗ ನೀನೂ ನನ್ನಂತೆ ಆರ್ಯಪುತ್ರನ ಕೈಯನ್ನಗಲಿರುವೆ. ನೀನೂ ಆರ್ಯಪುತ್ರನ ಪಾಣಿಯಿಂದ ಗೃಹೀತೆಯಾಗಿದ್ದೆ. ನಿನಗೇಕೆ ವಿಪತ್ತು ಬಂದಿತು, ನನ್ನಂತೆ ನೀನೂ ರಾಕ್ಷಸನ ಬಂದಿಯಾದೆಯಾ?

ಹನುಮಂತ—

ರಾಮನ ಬೆರಳಿಂದಗಲಿದ ಉಂಗುರ
ನಿನ್ನಂಗವನೇ ಸೇರುತಲಿ,
ವಿರಹದವಾಗ್ನಿಯ ವೇದನೆಯನು ತಾಂ
ಕಳೆವುದು ಕೆಲದಿನ ನಿನಗಿನ್ನು. ||೧೫||

ಸೀತೆ—(ಪ್ರತಿಯಾಗಿ) ನಾನು ಏನು ಮಾಡಲಿ?

ಹನುಮಂತ—(ಸ್ವಗತ) ಇವಳನ್ನು—

ಉಂಗುರ ಸೋಂಕಿದ ಎಡೆಯೆಡೆಯಲ್ಲಿಯು
ಪುಳಕವ ಕಂಡೆನು ಮೈಯೊಳಗೆ ;

ಶರಪಾಂಡುರತನು ತಳೆದುದು ಕಾಂತಿಯ-
ನುಂಗುರ ಸೋಂಕಿದ ಚಣದೊಳಗೆ. ||೧೬||

ಸೀತೆ—ಆರ್ಯಪುತ್ರನ ನಾಮಾಕ್ಷರಗಳನ್ನು ಓದುವೆನು. (ಕಣ್ಣು ಬಳಿಗೆ ಕೈಯನ್ನು ತಂದು ನೋಡುವಳು.)

ಹನುಮಂತ—

ಕೆಂಪಿನ ಅಂಗೈಬೊಗಸೆಯೊಳಿಳಿಯುತೆ,
ಸಿಡಿಯುವ ಕಂಬನಿ ಬಿಂದುಗಳು
ಒಡೆದಾ ಮುತ್ತಿನ ಚೂರುಗಳೆನ್ನಲು
ಹಿಮಕಣವೆನಿಪವು ಪದ್ಮದೊಳು. ||೧೭||

ಸೀತೆ—ಭದ್ರ, ನಿನ್ನ ದರ್ಶನಮಾತ್ರದಿಂದಲೇ ನನ್ನ ದೈವತವು ಪ್ರಸನ್ನವೆಂಬುದನ್ನರಿತೆನು. ಅಲ್ಲದೆ, ಉಂಗುರವನ್ನು ನೀನಿತ್ತುದರಿಂದ ಆರ್ಯಪುತ್ರನನ್ನೇ ಆಲಿಂಗಿಸಿದಂತೆ ಆನಂದಿಸಿದ್ದೇನೆ. ಈಗ ಇನ್ನು ನುಡಿಯ ಸಂದೇಶವನ್ನು ಕೇಳಲು ಮನಸ್ಸು ತವಕಿಸುತ್ತಿದೆ. ನಿನ್ನನ್ನು ಗುರುತಿಸುವುದಕ್ಕೆ ಮತ್ತೊಂದರ ಅಗತ್ಯವಿದೆಯೆಂದಲ್ಲ. ಆದ್ದರಿಂದ, ಆರ್ಯಪುತ್ರನ ಅಭಿಜ್ಞಾನವಚನವನ್ನು ಹೇಳು.

ಹನುಮಂತ—ಮೋಸದ ಬೀಡಿನಲ್ಲಿ ತೊಳಲುತ್ತಿರುವ ನಿನಗೆ ಅಭಿಜ್ಞಾನ ದೃಢವಾಗುವುದಕ್ಕಾಗಿಯೇ ಹೀಗೆಂದು ಹೇಳಿಕಳುಹಿಸಿರುವನು.

ಸೀತೆ—ಏನೆಂದು ? ಲಕ್ಷ್ಯದಿಂದ ಕೇಳುತ್ತಿದ್ದೇನೆ.

ಹನುಮಂತ—ಸ್ವಾಮಿನಿಯು ಕೇಳಬೇಕು—

" ನಿನ್ನ ಮಂದಿರಕಾನು ವೇಳೆ ತಪ್ಪಿಸಿ ಬರಲು
' ಕಳ್ಳ ! ದಂಡ್ಯನು ನೀನು ' ಎನುತೆ ಸವಿನುಡಿದು,
ಮಂದದೀಪದೆ ಸಮೆದು ಮಲ್ಲಿಗೆಯ ಮಾಲೆಯನು
ತೋಳ ಬಿಗಿಯುವ ನೆವದಿ ಬಿಗಿದಿರ್ದೆ ಬಗೆಯ." ||೧೮||

ಸೀತೆ—(ಹರ್ಷದಿಂದ ಸ್ವಗತ) ಆಶಾಲತೆಯೆ, ಈಗ ಕುಡಿಯೇರು ! ಮಾರುತಿಯು ನಿನ್ನನ್ನು ಅಮೃತದಿಂದ ಸೇಚನೆ ಮಾಡುತ್ತಿರುವನು, ಹೃದಯವೆ, ಆರ್ಯಪುತ್ರನ ಪ್ರವೇಶಮಾರ್ಗವು ನಿನಗೆ ಲಭಿಸಿದೆ !

ಪ್ರಾಣವೆ, ನೀನು ಯಮಲೋಕದ ಅರ್ಧದಾರಿಯಿಂದಲೇ ಹಿಂದಿರುಗಿರುವೆ. (ಪ್ರಕಾಶ) ಪವನಪುತ್ರ, ನಿನಗೆ ಏನಾದರೂ ಹೇಳಬೇಕೆಂದಿದ್ದೇನೆ. ಆದರೆ ಏನನ್ನು ಹೇಳಬೇಕೆಂದು ಕಾಣೆ. ನಿನ್ನ ಜನಕನಾದ ಮಾರುತನು ಲೋಕಕ್ಕೆಲ್ಲ ಪ್ರಾಣ ; ನನಗೆ ಮಾತ್ರ ನೀನೇ ಪ್ರಾಣವಾದೆ !

ಹನುಮಂತ—ಸೇವಕರನ್ನು ಸಂತೈಸುವುದರಲ್ಲಿ ದೇವಿ ಜಾಣಳು !

(ಮುಖವನ್ನು ಬಗ್ಗಿಸುವನು)

ಸೀತೆ—ಪವಮಾನನಂದನ, ಹೇಳು, ಹೇಳು. ನನಗೇನೋ ಸೋಜಿಗವೆನಿಸುತ್ತದೆ. ನೀನು ಯಾವ ಉಪಾಯದಿಂದ ಇಲ್ಲಿಗೆ ಬಂದೆ? ಸಮುದ್ರವನ್ನು ಹಾರಿದ್ದಾದರೂ ಹೇಗೆ?

ಹನುಮಂತ—ಆಗ ಸುಗ್ರೀವನ ಆಜ್ಞೆಯನ್ನು ದೇವತಾಪ್ರಸಾದದಂತೆ ಶಿರಸಾವಹಿಸಿ ವಾನರಸೈನ್ಯವು ಈ ದಿಕ್ಕಿಗೆ ಹೊರಟಿತು.

ಸೀತೆ—ಆಮೇಲೆ ?

ಹನುಮಂತ—ಆಮೇಲೆ—

ಮೇಘಾವೃತ ಗಿರಿಕಂದರಗಳೊಳು
ತೊರೆಗಳ ತೀರದ ತರುಗಳೊಳು
ಜಲನಿಧಿತಟಗಳೊಳಂತೆಯೆ ಹುಡುಕುತೆ
ಕಪಿಗಳು ಕಾಲವ ಕಳೆಯುತಿರೆ. ||೧೯||

ಸೀತೆ—ಆಮೇಲೆ ?

ಹನುಮಂತ—ಆಮೇಲೆ ಕಾಲಾವಧಿ ಮೀರಿದ ಕಾರಣ ವಾನರವೀರರೆಲ್ಲರೂ ಪ್ರಾಯೋಪವೇಶಮಾಡಲು ನಿಶ್ಚಯಿಸಿದರು.

ಸೀತೆ—ಅಯ್ಯೋ, ಆಮೇಲೆ ?

ಹನುಮಂತ—ಆಗ ಅಲ್ಪಾಯುಷನಾದ ಜಟಾಯುವಿನ ಅಣ್ಣ, ಸಂಪಾತಿಯೆಂಬ ಗೃಧ್ರರಾಜನು ನಮ್ಮ ಧ್ವನಿಯನ್ನು ಕೇಳಿ ನಾವು ಪ್ರಾಯೋಪವೇಶಕ್ಕೆ ಕುಳಿತಿದ್ದ ಸ್ಥಳಕ್ಕೆ ಬಂದನು.

ಸೀತೆ—ಆಮೇಲೆ ?

ಹನುಮಂತ—ಸ್ವಾಮಿನಿ, ಅವನು ನಿನ್ನ ಪಾಡನ್ನು ಇಲ್ಲಿಯೇ ಜತೆಯಲ್ಲಿ ವಾಸಮಾಡುತ್ತಿರುವವನೋ ಎನ್ನುವಂತೆ ವಿವರವಾಗಿ ನಮಗೆ ತಿಳಿಸಿದನು.

ಸೀತೆ—ಅಹಾ, ಆ ಜಾತಿಗೆ ಎಷ್ಟು ಉಪಕಾರಬುದ್ಧಿ ! ಹಿಂದೆಯೂ ಅವನ ತಮ್ಮನು ನನ್ನ ಸಲುವಾಗಿ ಪ್ರಾಣವನ್ನೇ ನೀಗಿದ್ದನು. ಆಮೇಲೆ ?

ಹನುಮಂತ—ಆಮೇಲೆ ಅವನ ಉಪದೇಶಾನುಸಾರವಾಗಿ ಮಹೋದಧಿಯನ್ನು ಹಾರಿದ್ದಾಯಿತು. ಈ ಉದ್ಯಾನವು ಸಿಕ್ಕಿತು.

ಸೀತೆ—ನೀನು ಹಾರಿದುದು ನನ್ನ ಶೋಕದ ಸಾಗರವನ್ನೇ. ವ್ಯಸನ ಕರ್ಣಧಾರ ! ಮಾರುತಪುತ್ರ ! ನನ್ನ ಈ ವ್ಯಸನಕ್ಕೆ ಕಡೆಯಾವುದೆಂದು ಹೇಳು.

ಹನುಮಂತ—ಪತಿಯ ಸಂದೇಶವೇ ಇದೆ.

ಸೀತೆ—ನನಗೆ ಸಂದೇಶವಿದೆಯೆ ? ಅನುಗೃಹೀತಳಾದೆ.

ಹನುಮಂತ—ಇದೇ ಪತಿಸಂದೇಶ—

“ ಕಾರ್ಮುಕವನೇರಿಸುತೆ ಪಡೆದೆ ನಿನ್ನನು ಅಂದು
ಜನಕರಾಜನ ಸಭೆಯೊಳಂತೆ ಇಂದು
ದಶಮುಖನ ಸೆರೆಯೊಳಿಹ ನಿನ್ನ ಪಡೆವೆನು ಮತ್ತೆ
ಕಾರ್ಮುಕವನೇರಿಸುತೆ ಸಮರಮುಖದೆ.” ||೨೦||

ಸೀತೆ—ಆರ್ಯಪುತ್ರನು ರಾಕ್ಷಸನ ಪ್ರಾಣವನ್ನು ಮೊದಲು ಕೊಂಡು ಆಮೇಲೆ ನನ್ನನ್ನು ಕೊಂಡೊಯ್ಯುವನು. ಹಾಗಾದಮೇಲೆ ಈಗ ನೀನು ತಡ ಮಾಡುವುದೇಕೆ ? ಬೇಗ ಹೋಗು. ಋಷಿಗಳ ಪ್ರಸಾದವಾದ ಈ ಚೂಡಾಮಣಿಯನ್ನು ಹಿಡಿ. ಆರ್ಯಪುತ್ರನಿಗೂ ಕೂಡ ಇದನ್ನು ನೋಡಿ ಮತ್ತೆ ಮತ್ತೆ ನೋಡುವ ಬಯಕೆಯಿಂದ ಸಮಾಧಾನವಾಗ ಬಹುದು. (ಚೂಡಾಮಣಿಯನ್ನು ಕೊಡುವಳು)

ಹನುಮಂತ—(ಸ್ವಗತ) ಅಹಾ, ದೇವಿಗೆ ಕಾಲೋಚಿತಜ್ಞಾನವೂ ದಾಕ್ಷಿಣ್ಯವೂ ಎಷ್ಟು ! (ಪ್ರಕಾಶ) ಸ್ವಾಮಿನಿಯು ಕೃಪೆಮಾಡಬೇಕು. (ತೆಗೆದು ಕೊಳ್ಳುವನು)

ಸೀತೆ—ಆರ್ಯಪುತ್ರನು ಶೋಕಪರವಶನಾಗದಂತೆ ನನ್ನ ವೃತ್ತಾಂತವನ್ನು ಅವನಿಗೆ ತಿಳಿಸು.

ಹನುಮಂತ—ಅಪ್ಪಣೆ.

ಸೀತೆ—ಈಗ ನೀನು ಹೋಗು. ನಾನು ಮೊದಲಿನಂತೆಯೇ ಶಿಂಶಪಾವೃಕ್ಷದ ಬಳಿಯನ್ನು ಸೇರಿ ನಿಮ್ಮ ಸುದ್ದಿಯನ್ನೇ ಕಾಯುತ್ತಿರುತ್ತೇನೆ.

ಹನುಮಂತ—ಸ್ವಾಮಿನಿಯ ಅಪ್ಪಣೆ—

ಅಸುರವಧೆ ಮುಗಿದಿರಲು ಕೃತಕಾರ್ಯನಾಗುತಲಿ
ಬಿಲ್ಲುಹೆದೆಗಳನೆಳೆದ ಮಚ್ಚೆಗಳು ಮೆರೆವ
ಛತ್ರಕಲಶಗಳೆಸೆವ ರೇಖೆಗಳ ಕರದಿಂದೆ
ನಿನ್ನ ವೇಣಿಯನೊಡೆಯ ತಾನೆ ಬಿಡಿಸುವನು. ॥೨೧॥

ಸೀತೆ—ನಿನಗೆ ನಿರ್ವಿಘ್ನವಾಗಲಿ !

(ನಿಷ್ಕ್ರಮ—ಇಬ್ಬರೂ)

**ಇಲ್ಲಿಗೆ ಆರನೆಯ ಅಂಕ ಮುಗಿದುದು.**

# ಏಳನೆಯ ಅಂಕ

(ಪ್ರಿಯೆ ಸೌದಾಮಿನಿಯೊಡನೆ ವಿದ್ಯಾಧರನ ಪ್ರವೇಶ)

ವಿದ್ಯಾಧರ—ಸೌದಾಮಿನಿ, ಇಷ್ಟು ಹೊತ್ತೂ ವಿದ್ಯಾದೇವತೆಯನ್ನು ಆರಾಧಿಸುತ್ತಿದ್ದುದರಿಂದ ಮಹೇಂದ್ರನ ಸೇವಾಕಾಲವಾಯಿತೆಂಬುದು ತಿಳಿಯಲೇ ಇಲ್ಲ. ಆದ್ದರಿಂದ ಕಷ್ಟವಾದರೂ ನನ್ನನ್ನು ಹಿಂಬಾಲಿಸು. ಕಾಲ ವಿಳಂಬವಾಗದಂತೆ ಬೇಗ ನಡೆದು ಹೋಗೋಣ.

ಸೌದಾಮಿನಿ—ಆರ್ಯ, ಇದೋ ಬಂದೆ.

ವಿದ್ಯಾಧರ—ಸೌದಾಮಿನಿ, ಬಾ.

ಕಂಪನು ಸೂಸುವ ಸುಮಗಳು ಶೋಭಿಪ
ಸೋರ್ಮುಡಿಯನು ಬಿಗಿ ಜಾರದೊಲು ;
ಕುಂಡಲಕಾಂತಿಗೆ ಕಾಮನ ಬಿಲ್ ನಿಲೆ
ಕುಚದಂಶುಕವನು ಬಿಗಿಗೊಳಿಸು. ||೧||

ಸೌದಾಮಿನಿ—ಆರ್ಯ, ಹಾಗೆಯೇ ಮಾಡುವೆನು. (ಹಾಗೆ ಮಾಡುವಳು)

(ಇಬ್ಬರೂ ಆಕಾಶದಲ್ಲಿ ಬರುವರು)

ವಿದ್ಯಾಧರ—ಸೌದಾಮಿನಿ, ನೋಡು, ನೋಡು—ನಾವು

ಶೈಲದ ತುದಿಯಿಂ ಭೋಂಕನೆ ನೆಗೆದಿರೆ
ಅಂಜನನೀಲದ ಆಗಸಕೆ ;
ಕ್ರಮದಿಂದುರ್ವಿಯೆ ವಿಕೃತಿಯನೆಲ್ಲವ
ನುಂಗುವ ತೆರದಿಂ ಕಾಣುತಿದೆ. ||೨||

ಸೌದಾಮಿನಿ—ಕುಲಪರ್ವತಗಳೇ ಈಗ ಸಂಶಯಾಸ್ಪದವಾಗಿವೆ !

ವಿದ್ಯಾಧರ—ನಮ್ಮ ಪ್ರಯಾಣವು ಬಹಳ ಸುಖಕರವಾಗಿದೆ. ಒಂದು ಕಡೆ ಪ್ರಿಯೆಯ ಪಯೋಧರದ ಸ್ಪರ್ಶ, ಇನ್ನೊಂದು ಕಡೆ ದಿಗ್ವಧುವಿನ ಪಯೋಧರದ ಸ್ಪರ್ಶ !

ನೂಂಕಲು ಸಗ್ಗದ ಗಾಳಿಗಳೈದುವೆ
ನೀಲದ ಬಣ್ಣದ ಬಾಂದಳದಿ ;

ವಾರಿಯ ಭಾರದ ಜಲಧರದುದರವ
ಬಳಿಗಳ ವಜ್ರವು ಕೊರೆಯುತಿರೆ. ||೩||

(ನೇಪಥ್ಯದಲ್ಲಿ)

" ಅಗ್ನಿಯು ದಾನವದೂಷಿತವಲ್ಲದ ಹವಿಯನ್ನುಯ್ಯಲಿ ಇನ್ಮುಂದೆ,
ಸುರನದಿಯುದಕದೊಳೇಳ್ ಮುನಿವರ್ಯರು ಗೈಯಲಿ ಸಂಧ್ಯಾ ಜಪಗಳನು,
ಸೂರ್ಯಾಶ್ವಗಳುಂ ನೇರದ ದಾರಿಯೊಳೈದಲಿ ಮಂದರಪರ್ವತವ,
ನಾರಿಯರುಳಿಯಲಿ ಹೀನರ ಭಯವನು, ತೊಲಗಲಿ ಸಗ್ಗದ ತಡೆಯಿನ್ನು." ||೪||

ವಿದ್ಯಾಧರ—ಅಹಾ, ಜಗತ್ತಿಗೇ ಘೋಷಣೆಯಂತಿದೆ! ರಾವಣನು ಹತನಾಗಿರಬೇಕು.

ಸೌದಾಮಿನಿ—ನಾನೂ ಅದನ್ನೇ ಊಹಿಸುವೆನು. ನಿನ್ನೆಯ ದಿನ ಸುದ್ದಿ ಬಂದಿತ್ತು—ರಾಕ್ಷಸಕುಲದಲ್ಲಿ ರಾವಣನೊಬ್ಬನನ್ನೇ ರಾಮನು ಉಳಿಸಿದ್ದಾನೆಂದು!

ವಿದ್ಯಾಧರ—ಈಗ ಮೂಲೋಕದ ಮುಳ್ಳನ್ನು ಕಿತ್ತು ಹಾಕಿದಂತಾಯಿತು!

ಸೌದಾಮಿನಿ—ಈಗ ಪತಿವ್ರತೆಯರ ಹೃದಯಗಳು ಸಮಾಧಾನದ ಉಸಿರನ್ನು ಬಿಡುತ್ತವೆ.

ವಿದ್ಯಾಧರ—ಈಗ ಇಷ್ಟಾರ್ಥಸಿದ್ಧಿಯಿಂದ ಪ್ರಫುಲ್ಲನೇತ್ರನಾಗಿರುವ ಸಹಸ್ರಾಕ್ಷನನ್ನು ಗೌರವಿಸೋಣ.

(ನಿಷ್ಕ್ರಮ—ಇಬ್ಬರೂ)

## ಇದು ಮಿಶ್ರ-ವಿಷ್ಕಂಭಕ

(ಭೇರಿಯನ್ನು ಬಾರಿಸುತ್ತಾ ತಿರುಗುತ್ತಿರುವ ಜಾಂಬವಂತನ ಪ್ರವೇಶ)

ಜಾಂಬವಂತ—(ಮೇಲಿನ ಪದ್ಯವನ್ನು ಮತ್ತೆ ಉಚ್ಚರಿಸಿ)

ಲೆಕ್ಕಿಸದೆ ನಮುಚಿಯನು ಆ ತ್ರಿವಿಕ್ರಮನಂತು
ರಭಸದಲಿ ಪಾದವನು ನೀಡುತಿರುವಂದು

ಮೊದಲೋಡಿ ನಡೆದಿದ್ದ ನಾನೆ ನೇಣ್ ಭೇರಿಯನು
ತಿರುತಿರುಗಿ ಬಾರಿಸಿದೆ ಗಂಭೀರವಾಗಿ ;
ದಶಮುಖನ ವಧೆಗೈದ ರಘುವೀರನೂ ಇಂದು
ಎನ್ನನೇ ಯೋಚಿಸಿಹನೀ ಕಾರ್ಯಕೆಂದು ;
ನೋಡಲುಚಿತನೆ ಅಹುದು, ಏಕೆಂದೊಡೀ ಜಗದೆ
ಅನುಭವವ ಪಡೆದವನೆ ಕಡುಜಾಣನಲ್ತೆ ! ||೫||

ಇದು ಬಹಳ ದೊಡ್ಡ ಹೊಣೆ. ಆದ್ದರಿಂದ ನೆರವೇರಿಸಲು ಹೊರಡುತ್ತೇನೆ.

(ನಿಷ್ಕ್ರಮ)

(ಯುದ್ಧವೇಷವನ್ನು ತೆಗೆದ ರಾಮ, ಲಕ್ಷ್ಮಣ, ವಿಭೀಷಣ, ಸುಗ್ರೀವ—ಇವರ ಪ್ರವೇಶ)

ರಾಮ—(ವಿಭೀಷಣನನ್ನು ನೋಡಿ) ವಯಸ್ಯ, ವಿಭೀಷಣ—

ಪುರವನ್ನೈದು ಭರ್ತೃಹೀನ ಜನವ ನೋಡುತೆ,
ಉಚಿತಕರ್ಮಗಳನು ಬೇಗ ನೀನೆ ನಿರವಿಸು ;
ದೊಡ್ಡದಾದ ದುಃಖದಲ್ಲಿ ತಮ್ಮ ಕುಲದ ನಿನ್ನನು
ಕಂಡು ನಗರಜನರು ಶಾಂತಿಯುಸಿರ ಬಿಡುವರು. ||೬||

ವಿಭೀಷಣ—ದೇವನು ಪ್ರಸನ್ನನಾಗಬೇಕು. ನಾನು ಬಂಧುಸ್ನೇಹದಿಂದ ಹೇಳುವುದಿಲ್ಲ—

ಎತ್ತ ಸಜ್ಜನರವರು ರಾಕ್ಷಸರು ನಾವೆತ್ತ
ಆದೊಡೆಯು ನಿನ್ನೆಡೆಯೆ ಸುಖವೀವುದೆನಗೆ ;
ಇಂತಪಾಯವ ತಂದ ಪೂರ್ವಜನ ಲಕ್ಷ್ಮಿಯನು
ಚಂಚಲೆಯನಾಶಿಸೆನು ನರವರನೆ ನಾನು. ||೭||

ರಾಮ—ಹಾಗೆನ್ನಬೇಡ. ಇದು ರಾಜಧರ್ಮವಲ್ಲ. ತಾನಾಗಿ ಬಂದ ಲಕ್ಷ್ಮಿಯನ್ನು ಕಡೆಗಣಿಸಬಾರದು.

ಗುಣಪರಾಯಣ, ನಿನ್ನ ಸಂಗಡವೆ ನಿರ್ಗುಣನು
ಆ ನಿನ್ನ ಪೂರ್ವಜನು ದೂರಗೈದ

ಧರ್ಮವದು ಸನ್ಮಾರ್ಗಪಾಲಕನೆ ನಿನ್ನನ್ನು
ಆಶ್ರಯಿಸಿ ಲಂಕೆಯಲಿ ದೃಢವಾಗಲಿ. ॥೮॥

ವಿಭೀಷಣ—ದೇವ, ಇನ್ನು ಮುಂದೆ—

ಬಹುಮಾನಕೆ ನಾನಾಸ್ಪದ
ನಹೆನೀ ಪರಿ ನೇಹದೋರೆ ನೀಂ ಕೃಪೆಯಿಂದಂ ।
ದಹನಾವನಿಯುಸ್ಥಿಯೆ ಶಿರ-
ವಹನೋಚಿತಮೆನಿಪುದಲ್ತೆ ಶಿವನಾದರದಿಂ. ॥೯॥

ರಾಮ—ವಯಸ್ಯ, ಸುಗ್ರೀವ, ನಿನ್ನ ಮಿತ್ರ ವಿಭೀಷಣನು ವ್ಯಾಕುಲನಾಗಿರುವನು. ಅವನಿಂದ ಮಾಡತಕ್ಕುದನ್ನು ಮಾಡಿಸಿ ಪ್ರಜೆಗಳೊಡನೆ ಸೇರಿಸು.

ಸುಗ್ರೀವ—ದೇವನ ಅಪ್ಪಣೆ. ಬಾ, ಲಂಕೇಶ್ವರ, ಇತ್ತ ಬಾ.

(ಇಬ್ಬರೂ ನಿಷ್ಕ್ರಮಿಸುವರು)

ರಾಮ—ವಿಭೀಷಣನನ್ನು ರಾಜ್ಯದಲ್ಲಿ ಪಟ್ಟಗಟ್ಟಿ ನನ್ನ ಮನೋರಥವು ಸಿದ್ಧಿಸಿದಂತಾಯಿತು. ಏಕೆಂದರೆ—

ಅರ್ಥಿಗಳ ಮನದಾಸೆಯನು ಸಫಲಗೊಳಿಸದಿಹ
ನೃಪನ ಲಕ್ಷ್ಮಿಯು ಬರಿದೆ ನಟನ ಲಕ್ಷ್ಮಿ;
ಛತ್ರಚಾಮರವಹುದು ಚಣದ ಕುರುಹು. ॥೧೦॥

(ಪ್ರವೇಶ)

ಸುಗ್ರೀವ—ದೇವನಿಗೆ ಜಯವಾಗಲಿ.

ರಾಮ—ಸುಗ್ರೀವ, ಇದೇನು ನಿರ್ಗಮನದ ಹಿಂದೆಯೇ ಆಗಮನ?

ಸುಗ್ರೀವ—ದೇವ, ಇದು ವಿಭೀಷಣನ ವಚನ—“ದೇವಿಯು ಲಂಕೆಯಿಂದ ಹೊರಡುವವರೆಗೂ ನಾನು ಲಂಕೆಯನ್ನು ಪ್ರವೇಶಿಸುವುದಿಲ್ಲ.”

ರಾಮ—(ಗೌರವದಿಂದ) ಹಾಗಾದರೆ, ನೀನೇ ಹೋಗಿ ಸಖಿಯನ್ನು ಕರೆದುಕೊಂಡು ಬಾ.

ಸುಗ್ರೀವ—ದೇವನ ಅಪ್ಪಣೆ. (ನಿಷ್ಕ್ರಮ)

ರಾಮ—(ವಿಚಾರಮಾಡುತ್ತಾ)

ವಾಲಿಯನು ಕೊಲ್ಲುತ್ತ್ರೆ, ಗಿರಿಶತದೆ ಜಲನಿಧಿಗೆ
ಶ್ರಮದಿಂದೆ ಸೇತುವೆಯ ಕಟ್ಟುತಂತೆ ;
ಲಂಕೆಗೂ ನಡೆತಂದು ಬಂಧುಮಿತ್ರಸಮೇತ
ರಾವಣನ ನಿಲ್ಲೆನಿಸಿ ಸಮರದೊಳಗೆ ;
ಆರ ಆಗಮನವನು ಕಾಯುತಿರ್ಪೆನೊ ಈಗ
ಮಾರುತಿಯ ಮಾತನ್ನು ನೆರೆನಂಬುತೆ ;
ಆ ರಾಜಸುತೆ ತಾನು ಸಹವಾಸವಿಂತಿರಲು
ನಿಂದೆಗಾಸ್ಪದಳಾಗದಿಹಳೆ ನೋಡೆ. ||೧೧||

ಲಕ್ಷ್ಮಣ—ಆರ್ಯನು ಪ್ರಸನ್ನನಾಗಬೇಕು.

ಸ್ತ್ರೀಯರು ಸುಖದಭಿಲಾಷಿಗಳೆನಲು
ಅವಿನಯಶೀಲರು ರಾಕ್ಷಸರು ;
ದೂರದೆ ನಾವಿರೆ, ಪರಿಕಿಸವೇಳ್ಪುದು
ದೇವಿಯ ಚಿತ್ತದ ಶುದ್ಧಿಯನು. ||೧೨||

ರಾಮ—ಲಕ್ಷ್ಮಣ, ಹನುಮಂತನೆಲ್ಲಿ ?

ಲಕ್ಷ್ಮಣ—ಅವನೀಗ ಯುದ್ಧಭೂಮಿಯಲ್ಲಿ—

ಕೆಡೆದದ್ರಿಶತಗಳನು ತೋಳಿಂದೆ ತಳ್ಳುವನು
ಕೆಳಗಿರುವ ಕಪಿಗಳನು ಬಿಡಿಸಲೆಂದು :
ಅಸುರವದನಗ್ರಸ್ತ ಭಲ್ಲೂಕವೀರರನು
ತನ್ನ ಶಕ್ತಿಯಿನೀಗ ಹೊರಗೆಳೆವನು ;
ಗೋಪುಚ್ಛಜಾತಿಗಳ ಯುದ್ಧದಾಯಾಸವನು
ಬೆಟ್ಟಝುರಿಗಳ ಜಲದೆ ಕಳೆಯುತಿಹನು
ಹತರಾದ ದಶವದನಬಂಧುಗಳನೆಸೆಯುವನು
ವಾರಾಶಿಯಲ್ಲಿರುವ ಮೊಸಳೆಗಳಿಗೆ. ||೧೩||

ರಾಮ—ಈ ಕಾರ್ಯವು ಅವನಿಗೆ ಯೋಗ್ಯವಾದುದೇ.

(ನೇಪಥ್ಯದಲ್ಲಿ)

'ಸರಿಯಿರಿ, ಸರಿಯಿರಿ ! ಆರ್ಯರೆ, ಸರಿಯಿರಿ !

ರಾಮ—ಲಕ್ಷ್ಮಣ, ಇದೇನು ?
ಲಕ್ಷ್ಮಣ—ಇದು ಆರ್ಯೆಯ ಆಗಮನದ ಸೂಚನೆ.
ರಾಮ—(ಸ್ವಗತ) ದೇವಿಯ ವಿಷಯದಲ್ಲಿ ಮಹಾಜನರು ಏನೆನ್ನುವರೋ !
(ಪ್ರಕಾಶ) ಲಕ್ಷ್ಮಣ, ಸುಗ್ರೀವನಿಗೆ ಆಜ್ಞಾಪಿಸು—'ಈ ದಾರಿಬಿಡಿಸುವುದೊಂದೂ ಬೇಡ. ಅಲ್ಲಿಯೇ ಯಾನದಿಂದಿಳಿದು ಪ್ರಕಟವಾಗಿಯೇ ಮೈಥಿಲಿಯು ಪ್ರವೇಶಿಸುವಂತೆ ಮಾಡು,' ಎಂದು.
ಲಕ್ಷ್ಮಣ—ಆರ್ಯನ ಅಪ್ಪಣೆ. (ನಿಷ್ಕ್ರಮ)
ರಾಮ—

ದಶಮುಖನ ಹೀಗಳೆದು ಎನ್ನ ನೇಮದೊಳಿರುವ
ಜಾನಕಿಯ ರೂಪವನು ನೋಡಿರೆಲ್ಲ,
ಚಾರಿತ್ರವೇ ಒಡವೆಯೆನಿಸುತಿರಲು. ||೧೪||

(ಲಕ್ಷ್ಮಣ, ಸುಗ್ರೀವರೊಡನೆ ಸೀತೆಯ ಪ್ರವೇಶ)

ಇಬ್ಬರೂ—ಇತ್ತ, ಇತ್ತ ಬರಬೇಕು.

(ನೇಪಥ್ಯದಲ್ಲಿ)

ಅಹಾ, ಲಕ್ಷ್ಮಣ ಸುಗ್ರೀವರ ಸದಾಚಾರ ಶ್ಲಾಘ್ಯವಾಗಿದೆ—
ಇಬ್ಬರೂ ನಮಿಸುತಿರೆ ತಲೆಬಾಗಿ ಬಹುದೂರ
ಕಣ್ಣುಗಳು ಬೀಳುವುವು ಜಾನಕಿಯ ಚರಣದೊಳೆ ! ||೧೫||

ಸೀತೆ—(ಸ್ವಗತ) ಈಗ ನನ್ನನ್ನು ಕಂಡು ಮಹಾಜನರು ಏನೆನ್ನುವರೋ ! ಆರ್ಯಪುತ್ರನು ನನಗೆ ಏನು ಹೇಳುವನೋ ! ಸ್ತ್ರೀ ಸ್ವಭಾವವೇ ವಿಶ್ವಾಸಯೋಗ್ಯವಲ್ಲ. ಅಧನ್ಯೆಯಾದ ನನ್ನ ಸಲುವಾಗಿ ಅನರ್ಥಸಾಗರದಲ್ಲಿ ಬಿದ್ದ ಆರ್ಯಪುತ್ರನು ತನ್ನ ಬಾಹುಬಲದಿಂದಲೇ ದಾಟಿರುವನು. ಮಾರುತಿ ಹೇಳಿದುದು ನಿಜವೇ ಆಯಿತು—'ಮೊದಲು ನಿನ್ನನ್ನು ಬಿಲ್ಲಿಂದ ಹೇಗೆ ಪಡೆದನೋ ಹಾಗೆಯೆ ಬಿಲ್ಲಿಂದ ಬಿಡಿಸುವನು', ಎಂಬುದಾಗಿ.

(ಎಲ್ಲರೂ ಸಮೀಪಿಸಿ)

ಲಕ್ಷ್ಮಣ—ಆರ್ಯನಿಗೆ ಜಯವಾಗಲಿ.
ಸುಗ್ರೀವ—ದೇವ, ಜಯ, ಜಯ !

ಸೀತೆ—ಆರ್ಯಪುತ್ರನಿಗೆ ಜಯವಾಗಲಿ !

ರಾಮ—ದೇವಿ, ಇತ್ತ ಬಾ. (ಎಂದು ಅರ್ಧದಲ್ಲಿಯೇ ಮುಖವನ್ನು ತಿರುಗಿಸುವನು)

ಇಬ್ಬರೂ—ಇದೇನಿದು ?

ರಾಮ—ಹನುಮಂತನನ್ನು ಕರೆದುಕೊಂಡು ಬಾ.

ಲಕ್ಷ್ಮಣ—ಆರ್ಯನ ಅಪ್ಪಣೆ. (ನಿಷ್ಕ್ರಮ)

ರಾಮ—ಸುಗ್ರೀವ, ಮೊದಲು ಇವಳನ್ನು ನೋಡಿಲ್ಲವೋ ?

(ಸುಗ್ರೀವನು ಭಯದಿಂದ ನಿಲ್ಲುವನು)

ರಾಮ—ಸುಗ್ರೀವ, ನೀನು ಇದುವರೆಗೂ ನೋಡದಿರುವ ವಿರಹವ್ರತದ ಮೂರ್ತಿಯನ್ನು ಈಗ ನೋಡು—

ಗಂಧಲೇಪದ ಮೋಹ ಕುಚಗಳಿಗೆ ಬಂದಿಹುದು
ಕೇಶಪಾಶದ ಗಂಟು ಪೂಗಂಪ ಸೂಸೆ ;
ಅರುಣವರ್ಣದ ಹೊಳೆಪು ಮಿರುಗುವಂಬರವಿಹುದು
ಹದಿಬದೆಯು ವಿರಹದಾ ನೇಮದಲ್ಲಿರಲು. ॥೧೬॥

ಸುಗ್ರೀವ—ದೇವ, ನನ್ನ ಅತಿಯಾದ ಉಪಚಾರದೋಷದಿಂದಲೇ ಈಕೆಯು ಹೀಗೆ ನಿಮ್ಮ ಕಣ್ಮುಂದೆ ಬಂದಿರುವಳು.

ರಾಮ—ಸರಿಯೆ. ಲಕ್ಷ್ಮಣನು ನೋಡುವುದೇ ಇಲ್ಲವೆ !

ಸೀತೆ—(ಸ್ವಗತ) ಅಯ್ಯೋ, ಅನಸೂಯೆಯ ಅನುಗ್ರಹವೇ ಇಂದು ನನಗೆ ಶಾಪದಂತೆ ಪರಿಣಾಮಗೊಂಡಿತೆ.

(ಲಕ್ಷ್ಮಣ, ಹನುಮಂತರ ಪ್ರವೇಶ.)

ಲಕ್ಷ್ಮಣ—ಆರ್ಯನಿಗೆ ಜಯವಾಗಲಿ !

ಹನುಮಂತ—ದೇವನಿಗೆ ಜಯವಾಗಲಿ !

ರಾಮ—ಲಕ್ಷ್ಮಣ, ಹನುಮಂತನೊಂದಿಗೆ ಇವಳನ್ನು ನೋಡು.

(ಇಬ್ಬರೂ ಸೀತೆಯನ್ನು ನೋಡಿ, ಮುಖವನ್ನು ತಿರುಗಿಸುವರು.)

ಹನುಮಂತ—ದೇವ, ಲಂಕೆಯಲ್ಲಿ ನಾನು ನೋಡಿದವಳೇ ಬೇರೆ. ಈಗ ಇವಳೇ ಬೇರೆ !

ಸೀತೆ—ಆರ್ಯಪುತ್ರ, ನಾನು ಒಂದು ವಿಷಯವನ್ನು ಹೇಳಬೇಕೆಂದಿದ್ದೇನೆ.

ರಾಮ—ನಿನ್ನ ರೂಪವೇ ಹೇಳುತ್ತಿದೆ!

ಸೀತೆ—ಕುಮಾರ, ನನ್ನ ಮಾತನ್ನು ಕೇಳು.

ಲಕ್ಷ್ಮಣ—ನಿನ್ನ ಮಾತನ್ನು ಕೇಳಿದುದರ ಫಲವೇ ಇದು.

ಸೀತೆ—ಮಾರುತಪುತ್ರ, ನೀನು ಕೇಳು.

ಹನುಮಂತ—ಆ ಕಾಲ ಹೋಯಿತು.

ರಾಮ—ಈಗಲೂ ನನ್ನ ಎದುರಿಗೆ ನಿಲ್ಲುವಳು—

ರಾಕ್ಷಸರಮಣರ ಸಂಗಡ ದಿನದಿನ
ಗೂಢದೆ ವಿಹರಿಸುತಲಿ ನೀನು;
ಜಾರೆಯೆ ದಂಡಕವನದಲ್ಲೆಮ್ಮನು
ವಂಚನೆಮಾಡಿದೆ ಋಜುಗಳನು. ॥೧೭॥

ಸೀತೆ—(ನಗುತ್ತಾ) ಆರ್ಯಪುತ್ರನಿಗೂ ಬಿರುನುಡಿಗಳನ್ನಾಡಲು ಬರುತ್ತದೆ.

ಸುಗ್ರೀವ—

ಕಿವಿಯಿಂ ಕೇಳುತೆ ಪತಿವಾಕ್ಯವನು
ಈಕೆಯು ನಗುವುದ ನೋಡಿದರೆ;
ನಾರಿಯರೆಲ್ಲರೊಳವರಳೊ ವರಳೋ
ಸಂಶಯ ತೊಲಗದು ಭಾವಿಸಲು. ॥ ೧೮ ॥

ಇವಳನ್ನು ಪ್ರಭುವಿನ ರಾಜ್ಯದಿಂದ ಆಚೆಗೆ ದೂಡಿರಿ. ಚಿತಾಗ್ನಿಯು ಕ್ಷೀರಾಹುತಿಗೆ ಹೇಗೆ ಯೋಗ್ಯವಾದೀತು?

ಲಕ್ಷ್ಮಣ—ಇವಳು ಹೀಗೆಯೇ ಶರೀರವನ್ನಿಟ್ಟುಕೊಂಡು ಹೋಗಲರ್ಹಳಲ್ಲ.

ಹನುಮಂತ—ದೇವ, ಇವಳಿಗೆ ತಕ್ಕ ಶಿಕ್ಷೆಯನ್ನು ವಿಧಿಸು.

ಸೀತೆ—ಆರ್ಯಪುತ್ರನು ಒಪ್ಪಿದರೆ ಅಗ್ನಿಯನ್ನು ಪ್ರವೇಶಿಸಬೇಕೆಂದಿರುವೆನು.

ರಾಮ—ಲಕ್ಷ್ಮಣ, ಈ ಪತಿವ್ರತೆಯ ಕೋರಿಕೆಯನ್ನು ಈಡೇರಿಸು.

ಲಕ್ಷ್ಮಣ—ಆರ್ಯನ ಅಪ್ಪಣೆ. (ಸ್ವಗತ) ಈಗ ಸಮಾಧಾನವಾಯಿತು. (ಪ್ರಕಾಶ) ದೇವಿ, ಇತ್ತ ಬಾ.

ಸೀತೆ—(ಸ್ವಗತ) ಹೃದಯ, ಆರ್ಯಪುತ್ರನ ಅಡಿಗಳಿಗೆರಗು.

(ನಿಷ್ಕ್ರಮಿಸುವರು)

ರಾಮ—ಕಪೀಶ್ವರ, ನೀನು ಹನುಮಂತ ಮುಂತಾದ ಸೇನಾಪತಿಗಳೊಂದಿಗೆ ಕುಮಾರನನ್ನು ಹತಶೇಷರಾದ ರಾಕ್ಷಸರ ಬಾಧೆಯಿಂದ ರಕ್ಷಿಸಿರಿ.

ಸುಗ್ರೀವ—ದೇವನ ಅಪ್ಪಣೆ. (ನಿಷ್ಕ್ರಮ)

ರಾಮ—ಇದೇನು, ಪ್ರತ್ಯಕ್ಷವನ್ನೂ ನಂಬದೆ, ಸೀತೆಯ ಬಗೆಗೆ ನನ್ನ ಮನಸ್ಸು ಬಹುಮಾನವನ್ನೇ ತೋರುತ್ತಿದೆಯೇಕೆ? ಪರಿತ್ಯಾಗಮಾಡಿ ಈಗ ಅನುತಾಪ ತೋರುವುದು ಬೇಡ. ನನ್ನ ಯತ್ನವೆಲ್ಲವೂ ಲೋಕಹಿತಕ್ಕಾಗಿ ಮಾತ್ರ ನಡೆಯಿತೆಂದುಕೊಳ್ಳುವೆನು.

(ರೋಮಾಂಚಪುಲಕಿತನಾದ ಲಕ್ಷ್ಮಣನ ಪ್ರವೇಶ.)

ಲಕ್ಷ್ಮಣ—ಆಶ್ಚರ್ಯ, ಆಶ್ಚರ್ಯ!

ರಾಮ—ವತ್ಸ ಲಕ್ಷ್ಮಣ, ಮೇಘಾಂತರ ಸಂಚಾರಿಯಾಗಿ ಮೇಘನಾದಗೈಯುತ್ತಿದ್ದ ಇಂದ್ರಜಿತುವನ್ನು ಜಯಿಸಿದಾಗಲೂ ನಿನ್ನ ದೇಹವು ಪುಲಕಗೊಂಡಿರಲಿಲ್ಲ. ಈಗ ಇಷ್ಟು ಸಂಭ್ರಮವೇಕೆಂದು ಹೇಳು.

ಲಕ್ಷ್ಮಣ—ಆರ್ಯನ ಅಪ್ಪಣೆಯಂತೆ ಮಹಾರ್ಣವದ ತೀರದಲ್ಲಿ, ನೀರಲ್ಲಿ ತೇಲಿ ಬಂದ ದೊಡ್ಡ ಮರಗಳನ್ನೊಟ್ಟಿ ಅಗ್ನಿಯನ್ನು ಹೊತ್ತಿಸಿದೆ.

ರಾಮ—(ಆದರಪೂರ್ವಕ) ಆಮೇಲೆ?

ಲಕ್ಷ್ಮಣ—ಬಳಿಕ ಪ್ರಳಯಾಗ್ನಿಯಂತೆ ಉರಿಯುತ್ತಿದ್ದ ಅದನ್ನು ಆಕೆಯು ಮೂರುಸಲ ಪ್ರದಕ್ಷಿಣೆ ಮಾಡಿದಳು.

ರಾಮ—ಆಮೇಲೆ?

ಲಕ್ಷ್ಮಣ—ಆಮೇಲೆ ದೇವಿಯು ನಿನ್ನನ್ನೂ ಅಯೋಧ್ಯೆಯಲ್ಲಿರುವ ಗುರುಜನರನ್ನೂ ತಲೆವಾಗಿ ನಮಸ್ಕರಿಸಿ, 'ಹೀಗೆಯೇ ಗುರುವಚನವಿಧೇಯನಾಗಿರು' ಎಂದು ನನ್ನನ್ನು ಹರಸಿ, ಭರತಶತ್ರುಘ್ನರಿಗೆ ಹೀಗೆ ಹೀಗೆ ಹೇಳಬೇಕೆಂದು ತಿಳಿಸಿದಳು. ಅನಂತರ ಆಕೆಯು ನುಡಿದಳು—"ಅಗ್ನಿದೇವನೆ, ನಿನ್ನ ಮುಂದೆ ಸತ್ಯಶಪಥವನ್ನು ಮಾಡುತ್ತಿದ್ದೇನೆ. ಹೊರಡುವ ಕಾಲದಲ್ಲಿ ನನಗೆ ರಾಕ್ಷಸನ ಭುಜಸ್ಪರ್ಶವಾಯಿತು; ಲಂಕೆಯಲ್ಲಿ ಪಾದಸ್ಪರ್ಶವಾಯಿತು." ಎಂದು ನಿರ್ಭಯವಾಗಿ ನೀರಲ್ಲಿಳಿಯುವಂತೆ ಬೆಂಕಿಯಲ್ಲಿಳಿದಳು.

ರಾಮ—ಇದು ವಿಸ್ಮಯಕಾರಿಯಾಗಿದೆ. ಆಮೇಲೆ?

ಲಕ್ಷ್ಮಣ—ಆಗ ಆಕಾಶದಲ್ಲಿ ಶಂಖಪಟಹಗಳು ಬಾರಿಸಿದುವು.

ರಾಮ—ಆಮೇಲೆ?

ಲಕ್ಷ್ಮಣ—ಆಗ—

ಸ್ತಿಮಿತನಯನಗಳಿಂದೆ ನಾವು ನೋಡುತ್ತಿರಲು
ಮಿಂಚುಗಳ ಮಿರುಗೆ ಮೈದಳೆದುದೆನಲು,
ಪರಿಶುದ್ಧೆ ಭೂಸುತೆಯನರಸಿಯನು ಮುಂಕೊಂಡು
ಸುರವದನನೆನಿಪಗ್ನಿ ಮಿಗೆ ಕಂಡನು. ||೧೯||

ರಾಮ—ಆಮೇಲೆ?

ಲಕ್ಷ್ಮಣ—ಆಗ—

ಕಡಲ ತೀರದ ಬನದ ಕುಸುಮಿತ ವೃಕ್ಷಗಳನೇ ತೊರೆಯುತೆ
ಭರದೆ ಪಾರಿದ ದುಂಬಿವಿಂಡುಗಳಿಂದೆ ಗಗನವೆ ಕಪ್ಪಿಡೆ;
ಧಾರೆಧಾರೆಯಿನಿಳಿದು ಸುರಿದುದು ಕಲ್ಪತರು ಸುಮವೃಷ್ಟಿಯು
ಅಗ್ನಿದೇವನ ಮುಂದೆ ಭರದಿಂದವನು ಕಣ್ಮರೆಯಾದನು. ||೨೦||

ರಾಮ—ಇರಲಿ, ಹೋಗಿ ನೋಡೋಣ. (ಇಬ್ಬರೂ ನಡೆಯುವರು)

(ನೇಪಥ್ಯದಲ್ಲಿ ದೇವಗಂಧರ್ವರು ಹಾಡುವರು)

ಯೋಗಶಕ್ತಿಯಿನಾರು ಮೂಲೋಕವನೆ ತನ್ನ
ಉದರದಾಧಾರದೊಳಗಡಗಿಸುತಲಿ,
ಕ್ಷೀರಸಾಗರದೊಳಗೆ ಭುಜಗೇಂದ್ರಶಯನದೊಳು
ನಿದ್ರೆಗೈವನೊ ಧೀರಮುದ್ರೆಯಿಂದ;
ಆ ಆದಿವಿಷ್ಣುವೇ ನೀನು ಜನಕಾತ್ಮಜೆಯು
ಪದ್ಮಸಂಭವೆಯಹಳು ಪದ್ಮಾಕ್ಷನೆ. ||೨೧||

(ಇತರರು ಹಾಡುವರು)

ಮದವಾರಿ ನೆನೆಯಿಸಲು ಕಪ್ಪೆನಿಪ ಹಿಮಧವಳ
ಶುಕ್ರನಾನೆಯು ಕರ್ಣಚಾಮರಗಳಿಂದೆ;
ಮಂದಾಕಿನೀಪದ್ಮರಜಸುರಭಿ ಮಾರುತನು
ಯುದ್ಧದಾಯಾಸವನು ನಿನಗಿಳಿಸಲಿನ್ನು. ||೨೨||

ರಾಮ—ಲಕ್ಷ್ಮಣ, ನೋಡು—ಪ್ರಭಾತಿಶಯದಿಂದ ಋಖಿಬಾನ್ನಳಿರಡೂ ಬೇರೆಯೆನಿಸುತ್ತಿವೆ—

ಸೇತುಶೈಲಗಳಿಹವು ಮೇರುಶೃಂಗಗಳಂತೆ
ಕಡಲ ತೀರದ ಬನವು ನಂದನವೆಯೆನಲು;
ಕನಕವರ್ಣಕಪೀಂದ್ರ ಸೈನ್ಯವಿದು ತಳೆಯುತಿದೆ
ಇಮ್ಮಡಿಯ ಪೊಂಬೆಳಗನಹಹ ತಳತಳಿಸಿ. ॥೨೩॥

(ನೇಪಥ್ಯದಲ್ಲಿ)

'ದೇವತೆಗಳ ಅಪ್ಪಣೆಯಂತೆ ಇಗೋ ನಾರದನು ಬರುತ್ತಿರುವೆನು.'

(ಇಬ್ಬರೂ ವಿನಯದಿಂದ ನೋಡುವರು.)

(ಪ್ರವೇಶಿಸಿ)

ನಾರದ—ಲೀಲಾಮಾನುಷಸ್ವರೂಪನಾದ ರಾವಣಾಂತಕನಿಗೆ ಜಯವಾಗಲಿ.

ರಾಮ—ಲಕ್ಷ್ಮಣ, ಈ ಆಶ್ಚರ್ಯವು ಕಾಣುತ್ತಿದ್ದರೂ ನಂಬುವಂತಿಲ್ಲ.

ನಾರದ—ಇದಕ್ಕಿಂತ ಹೆಚ್ಚಿನ ಆಶ್ಚರ್ಯವೇನು? ಆರಾಧ್ಯರಾದ ಇಂದ್ರಾದಿ ದೇವತೆಗಳೆಲ್ಲರೂ ತಾವಾಗಿಯೇ ನಿನ್ನನ್ನು ಆರಾಧಿಸಲು ಬರುತ್ತಿರುವರು.

ರಾಮ—ಅದಕ್ಕಾಗಿಯೇ ಈ ಪ್ರಭಾಪ್ರವಾಹ. ತಮ್ಮ ಅನುಗ್ರಹದಿಂದ ಪರಿಶುದ್ಧನಾದ ನಾನು ಈಗ ಬೇರೆಯವನೇ ಆಗಿದ್ದೇನೆ.

ನಾರದ—

ಈತನೇ ಸ್ವರ್ಗಗತ ದೇವರ್ಕಳಧಿಪತಿಯು
'ಮೇಷ ಮೇಧಾತಿಥಿಯು', 'ವಜ್ರಕೇತು';
'ವಾರಿವರ್ಷಣ'ನೆಂದು ವೇದಶಾಖೆಗಳೆಲ್ಲ
ಇವನ ಮಹಿಮೆಯ ನುತಿಸಿ ಸಾರುತಿಹವು. ॥೨೪॥

ರಾಮ—ದೇವದೇವನಿಗೆ ನಮಸ್ಕರಿಸುವೆನು.

ನಾರದ—ನೋಡು—

ಕರಿಗೊರಲ ಬೆಂಕಿಕಿಡಿಯೊಗೆಯುತಿಹ ಕಣ್ಣುಗಳ
ನಾಗರತ್ನದ ಹಾರ ಎದೆಯೊಳೆಸೆವ;
ರುದ್ರರಿವರಿಂದುಕಳೆ ಪನ್ನೊಂದ ಮುಡಿಯುತ್ತೆ
ಐದನರೆಯುತೆ ಭಸ್ಮದಂತಿಡುವರು. ॥೨೫॥

ರಾಮ—ಈ ದೇವೋತ್ತಮರಿಗೆ ನಮೋನಮಃ!
ನಾರದ—ಇವರೇ ವಸುಗಳು. ಇವರೇ ಅಶ್ವಿನೀದೇವತೆಗಳು.
ರಾಮ—ಲೋಕಹಿತಪರಾಯಣರಾದ ದೇವತೆಗಳಿಗೆ ನಮಸ್ಕಾರ.
ನಾರದ—

ಮೊದಲ ಮನುವಿಂ ಕಡೆಯ ದಶರಥನವರೆಗೆಲ್ಲ
ನಿನ್ನ ಪಿತೃಗಳು ನೆರೆದು ನಿಂತಿಹರು ನೋಡು;
ಇಂದ್ರರಾಜ್ಯದ ಸಿರಿಯನೊಲ್ಲದೆಯೆ ದಿನದಿನವು
ನೀನೀವ ಪಿಂಡವನೆ ಕಾಯುವರು ಇವರು. ||೨೬||

(ಇಬ್ಬರೂ ಕಂಬನಿದುಂಬಿ ನಮಿಸುವರು)

ರಾಮ—

ಕಣ್ಣಿಂದಪ್ಪುತಲಿರುವೀ ತಂದೆಯ
ಕಂಡೆಯ ಲಕ್ಷ್ಮಣ ಇಗೊ ಇಲ್ಲಿ;
ಸತ್ಯವ ಕಾಯುವ ನೇಮದಿನೀತನು
ಎನ್ನನು ಬಿಟ್ಟನು ಅಸುವೊಡನೆ. ||೨೭||

ಲಕ್ಷ್ಮಣ—ಆರ್ಯ, ನನಗೆ ಸ್ವಪ್ನವೋ ಎನಿಸುತ್ತಿದೆ.
ರಾಮ—ನಾರದರೆ! ದೇವತೆಗಳು, ಋಷಿಗಳು, ಪಿತೃಗಳು — ಎಲ್ಲರೂ ಆಗಮಿಸಿರುವುದೇಕೆ?
ನಾರದ—ನಿನ್ನ ದೇವಿಯಾದ ಸೀತೆಯ ಪಾತಿವ್ರತ್ಯದ ಪ್ರಭಾವದಿಂದ.
ರಾಮ—ಈ ಅದ್ಭುತಗಳ ದರ್ಶನಮಾತ್ರದಿಂದಲೇ ನನಗೆ ನಂಬಿಕೆ ಬಂದಾಗಿತ್ತು. ಆದರೆ ಅವಳ ರೂಪದ ಶೋಭಾತಿಶಯದ ಕಾರಣ ಮಾತ್ರ ಸಂದಿಗ್ಧವಾಗಿದೆ.
ನಾರದ—ಅವಳ ಶೋಭಾತಿಶಯದ ಕಾರಣವನ್ನು ಅರಿಯೆಯೇನು?
ರಾಮ—ಇಲ್ಲ, ಭಗವನ್.
ನಾರದ—ಮಹರ್ಷಿಪತ್ನಿಯಾದ ಅನಸೂಯೆ ಆಕೆಗಿತ್ತ ವರಪ್ರಭಾವವೇ ಅದು.
ರಾಮ—ದಂಡಕಾರಣ್ಯದಲ್ಲಿಯೇ ನನಗೆ ಈ ಸಂದೇಹವುಂಟಾಗಿತ್ತು. ಆದರೆ ಅದರ ರಹಸ್ಯವನ್ನು ಕೇಳಿ ತಿಳಿದುಕೊಳ್ಳಲಿಲ್ಲ.

ನಾರದ—ಆಕೆಯ ಶರೀರದಮೇಲೆ ಏನಿದ್ದರೆ ಅದೇ ನಿನ್ನ ಕಾಣಿಗೆ ಅಲಂಕಾರ ಪ್ರಾಯವಾಗಿ ಕಾಣುವುದೆಂಬುದೇ ವರ. ಆದುದರಿಂದಲೇ—

ಪವಡಿಪ ಸಮಯದೊಳಂಟಿದ ದೂಳೇ
ಕುಚಗಳ ಚಂದನಲೇಪತೆಯು;
ಪಡೆದುದು, ಮರದಿಂದುದುರಿದ ಹಣ್ಣೆಲೆ
ಯಾದುದು ಮುಡಿಯಾಭರಣವೆನೆ. ||೨೮||

ರಾಮ—ದೇವತೆಗಳ ಶಾಸನ ಹಾಗಿರಲಿ. ಸತ್ಯವಾದಿಯೂ ಜ್ಞಾನಚಕ್ಷುವೂ ಆದ ನೀನೇ ಪ್ರಮಾಣ!

ಲಕ್ಷ್ಮಣ—(ಸ್ವಗತ) ಅಹಾ, ಅಜ್ಞರಾದ ನಾವು ಬೆಂಕಿಯ ಮಾತುಗಳನ್ನಾಡಿದರೂ ಮಹಾದೇವಿಯು ಚಿತ್ತವಿಕಾರವನ್ನು ತೋರಿಸಲಿಲ್ಲ.

ರಾಮ—ಭಗವನ್, ದೇವತೆಗಳೂ ಪಿತೃಗಳೂ ಮಹರ್ಷಿಗಳೂ ಏನೆಂದು ಅಪ್ಪಣೆ ಮಾಡುತ್ತಾರೆ?

ನಾರದ—'ರಾವಣನ ಪ್ರಾಣದೊಂದಿಗೆ ನಿನ್ನ ವನವಾಸಕಾಲವೂ ಮುಗಿಯಿತು. ಆದ್ದರಿಂದ ದೇವಿಯೊಡನೆ ಅಯೋಧ್ಯಾನಗರಿಯನ್ನು ಪ್ರವೇಶಿಸಬೇಕು,' ಎಂದು.

ರಾಮ—ಅನುಗೃಹೀತನಾದೆ.

ನಾರದ—ಆದ್ದರಿಂದ ದೇವಿಯನ್ನು ಕರೆತರಲು ಲಕ್ಷ್ಮಣನಿಗೆ ಹೇಳು.

ರಾಮ—(ಜನಾಂತಿಕ) ಲಕ್ಷ್ಮಣ, ಇದಕ್ಕೆ ಅಡ್ಡಿಯೇನು?

ಲಕ್ಷ್ಮಣ—ಇನ್ನು ಪರೀಕ್ಷೆ ಮಾಡುವುದೇನಿದೆ? ಈಕೆಯ ಚಾರಿತ್ರಶುದ್ಧಿಗೆ ದೇವತೆಗಳೂ ಪಿತೃಗಳೂ ಮಹರ್ಷಿಗಳೂ ಸಾಕ್ಷಿಗಳಾಗಿರುವರು.

ರಾಮ—(ಪ್ರಕಾಶ) ಮಹರ್ಷಿಗಳ ಅಪ್ಪಣೆಯಂತೆ ಮಾಡು.

ಲಕ್ಷ್ಮಣ—ಅಣ್ಣನ ಅಪ್ಪಣೆ. (ನಿಷ್ಕ್ರಮ)

ನಾರದ—ಅಹಾ, ನಿನ್ನ ಪ್ರಭಾವವು ಆಶ್ಚರ್ಯಜನಕವಾಗಿದೆ! ನೋಡು, ನೀನು—

ಮೂಜಗಕ್ಕೆ ಮುಳ್ಳೆನಿಪ್ಪ ಪಗೆಯ ಕೊಲ್ಲೆ ಬಿಲ್ಲಿನಿಂ
ಇಂದ್ರಚಾಪವಿನ್ನು ವೋಡದೊಡವೆಯಲ್ತೆ ಕೇವಲಂ? ||೨೯||

ರಾಮ—ಅದಕ್ಕೆ ನಿಜವಾಗಿ ದೇವತೆಗಳೂ ಋಷಿಗಳೂ ಕಾರಣ.

(ಸೀತೆ, ಲಕ್ಷ್ಮಣರ ಪ್ರವೇಶ)

ಸೀತೆ—ಈ ವೃತ್ತಾಂತದಿಂದ ನಾಚಿಕೆಯಾಗುತ್ತದೆ; ಇಲ್ಲ, ಇಲ್ಲ, ಸಂತೋಷವೇ ಆಗುತ್ತದೆ. ಆ ಪಾಪಿಯೊಡನೆ ಹೋಗುವಾಗ ಹಸ್ತಸ್ಪರ್ಶವೂ, ಲಂಕೆಯಲ್ಲಿ ಪಾದಸ್ಪರ್ಶವೂ ಆಗಿಹೋಯಿತು. ಆ ಪಾಪಿಯ ದೇಹ ಸ್ಪರ್ಶದಿಂದ ಅಪವಿತ್ರವಾದ ಅಂಗಗಳು ಅಗ್ನಿಯನ್ನು ಬಿಟ್ಟರೆ ಮತ್ತೆ ಪರಿಶುದ್ಧವಾಗುವುದೆಂತು? (ನಡೆದು, ನೋಡಿ) ಆರ್ಯಪುತ್ರನಿಗೆ ಜಯವಾಗಲಿ.

ರಾಮ—ದೇವಿ, ಇತ್ತ ಬರಬೇಕು.

ನನ್ನಿಂ ಶಂಕಿತೆಯಾದಾ ದೇವಿಯೆ
ಧರ್ಮಾತ್ಮಳೆ ನೀನಾಗಿರೆಯು;
ತಮ್ಮಿಂದಗಲಿದ ಸತಿಯರನುಳಿದರು
ನಂಬುವರೆಂತಾ ಜಗದೊಳಗೆ? ||೩೦||

ಸೀತೆ—ಇದರ ವಿಷಯವನ್ನು ಆರ್ಯಪುತ್ರನೇ ಬಲ್ಲನು!

ರಾಮ—ದೇವಿ, ನಿನ್ನಲ್ಲಿ ಪ್ರೀತಿಯಿದ್ದರೂ, ಅಪನಂಬಿಕೆಯುಂಟಾಗಿ ಒಳ್ಳೆಯ ಫಲವನ್ನೇ ತಂದಿತು. ಅದರಿಂದಲ್ಲವೇ ದೇವತೆಗಳೂ ಮಹರ್ಷಿಗಳೂ ಪ್ರತ್ಯಕ್ಷರಾದುದು?

(ಅಭಿಷೇಕವಾದ ವಿಭೀಷಣನ ಪ್ರವೇಶ)

ವಿಭೀಷಣ—ದೇವನಿಗೆ ಜಯವಾಗಲಿ.

ರಾಮ—ವಿಭೀಷಣ, ಲಂಕೆಯಲ್ಲಿ ಏನು ಸುದ್ದಿ?

ವಿಭೀಷಣ—ಲಂಕಾವಾಸಿಗಳಾದ ಮಹಾಜನರೆಲ್ಲರೂ ದೇವನನ್ನು ಬಯ್ಯುತ್ತಿರುವರು.

ರಾಮ—ಏನೆಂದು? (ವ್ಯಾಕುಲನಾಗುವನು)

ವಿಭೀಷಣ—'ಹಾಲು ಹೆಂಡವೆಂದು ಸಂಶಯಪಡುತ್ತಿರುವೆ. ಪರಿಶುದ್ಧವಾದ ಚಿನ್ನಕ್ಕೆ ಅಗ್ನಿಯ ಅಗತ್ಯವಿರುವುದಿಲ್ಲ. ದೀವಿಗೆಯನ್ನು ಕತ್ತಲು ಕಳಂಕಗೊಳಿಸಬಲ್ಲುದೆ?' ಎಂದು.

ರಾಮ—ಈಗ ಜನರ ಮಾತನ್ನು ಕೇಳಿ ಸಮಾಧಾನವಾಯಿತು.

ವಿಭೀಷಣ—ದೇವ, ನಾಗರಿಕರು ಮಹಾದೇವಿಗೆ ಬಾಗಿಸಿರುವ ಶಿರಗಳನ್ನು ಇನ್ನೂ ಮೇಲೆತ್ತಿಲ್ಲ.

ರಾಮ—ಜಾನಕಿಯ ಮಹಾಮಹಿಮೆಯನ್ನು ನಾನು ಬಲ್ಲೆ.

ವಿಭೀಷಣ—ನೋಡು— ಭಗವಾನ್ ಕುಬೇರನ—

ಪುಷ್ಪಕವೆಂಬ ವಿಮಾನವು ನೋಡಿದು
ಪುಷ್ಪಾಯುಧಸಮ ! ಗುಣನಿಧಿಯೆ !
ದೊರೆತಿರೆಯು ಮೂಜಗವೆ ಮತ್ತುಳಿವುದವಕಾಶ
ಮಿಕ್ಕುದಕ್ಕೆನ್ನಲಿದು ಆಸೆಗೆಣೆಯು. ||೩೧||

ರಾಮ—ಭಗವಾನ್ ಕುಬೇರನಿಗೆ ಹೇಳಿಕಳುಹಿಸು.

ನಾರದ—ಬೇಡ, ಬೇಡ! ರಾಕ್ಷಸನ ಚಿರಾನುಭವದಿಂದ ಕಲುಷಿತವಾದ ಈ ವಿಮಾನವನ್ನು ದೇವೀಸಮೇತನಾದ ನೀನು ಆರೋಹಣದಿಂದ ಪವಿತ್ರಗೊಳಿಸಿ, ಬಳಿಕ ಅಯೋಧ್ಯೆಯಿಂದ ಕೈಲಾಸಕ್ಕೆ ಕಳುಹಿಸು.

ರಾಮ—ಸರಿಯೆ. ಲಕ್ಷ್ಮಣ, ಮೊದಲು ದೇವಿಯನ್ನು ಹತ್ತಿಸು.

ಲಕ್ಷ್ಮಣ—ಆರ್ಯನ ಅಪ್ಪಣೆ.

ಸೀತೆ—ಆಹಾ.

ರಾಮ—(ನಗುತ್ತಾ) ದೇವಿ,

ನಾನು ರಾಮನು ನಿಜದೆ, ಶಶಿಮುಖಿ ! ಕಪಟ ರಾವಣನಲ್ಲವು
ರಥವ ನಡೆಸುಹನಿವನು ತಮ್ಮನು, ಧನುಜಸಾರಥಿಯಲ್ಲವು ;
ಬಹಳ ಮಾತಿಂದೇನು ಸರಸಿಜದೆಸಳ ಕಾಂತಿಯನೆಸೆಯುವ
ಹೊಳೆವ ಉಂಗುರವಿರಲು ನಿನ್ನಯ ಕೈಯೊಳೇತಕೆ ಸಂಶಯ ?
||೩೨||

ಸೀತೆ—ಇದೋ ಆ ಎರಡು ಆಶ್ಚರ್ಯರತ್ನಗಳಿಗೂ ಕೈ ಮುಗಿಯುವೆನು. ಅವಿಲ್ಲದಿದ್ದರೆ ಆರ್ಯಪುತ್ರನನ್ನೂ ರಾಕ್ಷಸನನ್ನೂ ಬೇರ್ಪಡಿಸಿ ನಿಜವನ್ನೆಂತು ತಿಳಿದೇನು?

ಲಕ್ಷ್ಮಣ—ಆರ್ಯೆ, ನಿನ್ನ ಅಪ್ಪಣೆಯಂತೆ ನಾನು ದಂಡಕಾರಣ್ಯದಲ್ಲಿ ಹೊರಟಾಗ—

'ಹದಿಬದೆಯೆನ್ನಯ ನೇಮವೆ ಕಾವುದು ಬಾಣಗಳಲ್ಲವು, ಸಾಕ್ಷಿಗಳು
ದೇವತೆಗಳೆ' ಎಂದೊರೆದಾ ದೇವಿಯೆ, ಅಂತೇ ನಡೆದುದು ನೋಡುವೊಡೆ;
ಸಾಧಾರಣ ನರರಂದದೆ ಭಾವಿಸಿ ನಿನ್ನಯ ಮಹಿಮೆಯನರಿಯದೆಯೆ
ನಾನಂದೊರೆದುದ ಮನ್ನಿಸು ದೇವಿಯೆ ಶರಣೆಂಬೆನು ನಿನ್ನಡಿಗಳಿಗೆ. ||೩೩||

(ನಮಸ್ಕರಿಸುವನು)

ಸೀತೆ—ಕುಮಾರ, ಏಳು, ಏಳು. ಇದರಲ್ಲಿ ನಿನ್ನ ತಪ್ಪೇನೂ ಇಲ್ಲ. ರಾಕ್ಷಸನ ತಲೆಯ ಸೋಂಕಿನಿಂದ ಕೊಳೆಯಾದ ಕಾಲುಗಳು ಕುಮಾರನ ಕಣ್ಣೀರಿಂದ ತೊಳೆದಂತೆ ಈಗ ಪರಿಶುದ್ಧವಾಗಿದೆ.

(ನೇಪಥ್ಯದಲ್ಲಿ)

" ಕಂಡೆನತಿಮಾನುಷದ ಮಹಿಮೆಯ
ದೇವದೇವಿಯರಿರ್ವರ ;
ದೇವನಳಿಸಿರೆ ತನ್ನ ಧೈರ್ಯವ
ದೇವಿಯುಳಿದಿರಲುರಿಯೊಳು. " ||೩೪||

ನಾರದ—ಭದ್ರಮುಖ, ಭಗವಾನ್ ಅಗ್ನಿಯೇ ನಿನ್ನಮುಂದೆ ಸಾಕ್ಷಿ ಹೇಳುತ್ತಿರುವನು.

(ಆಕಾಶದಲ್ಲಿ ಶಂಖಪಟಹಗಳು ಮೊಳಗುವುವು. ಎಲ್ಲರೂ ವಿಸ್ಮಯದಿಂದ ನೋಡುವರು.)

ನಾರದ—ಭದ್ರಮುಖ, ತಮ್ಮ ನಿರ್ಗಮನದಿಂದ ದೇವತೆಗಳು ನಿನ್ನ ನಿರ್ಗಮನವನ್ನು ಬಯಸಿರುವರು.

ರಾಮ—ಬಾ, ವೈದೇಹಿ, ಬಾ—

ನಮಿಸು ದೇವರ್ಷಿಯನು ದೇವರಿಂಗಿತವೊರೆವನಂ
ವೇದೋಪವೇದಗಳ ನಿತ್ಯಪರಮಾಲಂಬನಂ. ||೩೫||

(ಕೈ ಹಿಡಿದುಕೊಂಡು ತೋರಿಸುವನು. ಸೀತೆಯು ನಮಸ್ಕರಿಸುವಳು.)

ಸೀತೆ—ಈಗ ನಿಜವಾಗಿ ಆರ್ಯಪುತ್ರನ ಹಸ್ತಸ್ಪರ್ಶವನ್ನೇ ಪಡೆದೆನೆನ್ನಲು ಅದ್ಭುತ ಉಂಗುರವೇ ಪ್ರಮಾಣ, ರಾಕ್ಷಸಮಾಯೆಯಿಂದ ಬಿಡುಗಡೆಯಾಯಿತೆನಿಸುತ್ತದೆ.

ರಾಮ—ಮೊದಲು ರಾಕ್ಷಸಿಯ ಮಾಯೆಯಿಂದ ವಂಚಿತನಾದ ನನಗೆ ಈಗ ಆಶ್ಚರ್ಯ ಚೂಡಾಮಣಿಯೇ ನಂಬಿಕೆಯುಂಟುಮಾಡುವ ಸಾಧನ ವಾಯಿತು.

ನಾರದ—ಭದ್ರಮುಖ, ದೇವತೆಗಳನ್ನು ನಾನು ಹಿಂಬಾಲಿಸುವೆನು. ನಿನಗೆ ಮತ್ತೇನು ಪ್ರಿಯವನ್ನು ಮಾಡಲಿ ?

ರಾಮ—ನನ್ನ ಇಷ್ಟಾರ್ಥವೆಲ್ಲವೂ ಕೈಗೂಡಿದೆ. ಆದರೂ ಇದು ಭರತವಾಕ್ಯದ ಹಾರೈಕೆಯಾಗಲಿ —

ಮಂತ್ರಪೂತಹವಿಗಳಿಂದ್ರನಿಂದ ಮಳೆಯ ಸುರಿಸಲಿ
ವಿಷಮಬಾಣನಪಥದಲ್ಲಿ ಕಣೆಯ ಬಿಡುವುದಳಿಯಲಿ ;
ರಾಜರೆಲ್ಲ ರಾಜಧರ್ಮನಿರತರಿಳೆಯ ಪೊರೆಯಲಿ
ಪ್ರಜ್ಞೆ ಬದ್ಧಮಾನವನ್ನು ನೀಗಿ ಸತತ ತಿಳಿಯಲಿ ||೩೫||

**ಇಲ್ಲಿಗೆ ಏಳನೆಯ ಅಂಕ ಮುಗಿದುದು.**

(ಸಮಾಪ್ತಿ)

ಭಾಸನ ನಾಟಕ ಚಕ್ರವಿ-
ಲಾಸಮನೊಳಕೊಂಡ ಶಕ್ತಿಭದ್ರನ ಕೃತಿಯಂ ।
ದೋಸಂ ಪೊರ್ದದ ತೆರದಿಂ
ಭಾಷಿಸಿದಂ ಕೃಷ್ಣಮೂರ್ತಿ ಕನ್ನಡನುಡಿಯೊಳ್ ॥
ಪೊಸದಿತಿವೃತ್ತಂ ಪೊಸನುಡಿ
ಪೊಸಮಾರ್ಗಂ ನಾಯಕಾದಿಭಾಷಣವಿಧಿಯೊಳ್ ।
ಪೆಸರಂ ಸಾರ್ಥಕಗೊಳಿಸುವ
ರಸಮದ್ಭುತಮೆಸೆಯೆ ರಸಿಕರಾನರೆ ಮುದಮಂ ॥



